CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಜನವರಿ ೨೨, ೨೦೦೪ (ಮಾಘ ೨, ಶಕ ವರ್ಷ ೧೯೨೫) | ಸಂಚಿಕೆ ೪ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಭಾರತೀಯ ವೈದ್ಯ ಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯಲ್ಲಿ ಹೌಸ್ ಸರ್ಜನ್ ಮತ್ತು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ನೀಡಲಾಗುತ್ತಿರುವ ಶಿಷ್ಯವೇತನ ಹೆಚ್ಚಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಆಕುಕ 152 ಪಿಐಎಂ 99, ದಿನಾಂಕ: 6.6.2000.

2) ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ನಿರ್ದೇಶನಾಲಯ, ಇವರ ಪತ್ರ ಸಂಖ್ಯೆ: 1) ಭಾವೈಪ: 18:ಅ(1):2002-2003, ದಿನಾಂಕ: 22.2.2003 ಹಾಗೂ 9.6.2003.
2) ಭಾವೈಪ: 31:ಅ(1):2002-2003, ದಿನಾಂಕ: 22.7.2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸರ್ಕಾರದ ಆದೇಶ ದಿನಾಂಕ: 6.6.2000 ದಲ್ಲಿ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯಲ್ಲಿನ ಸರ್ಕಾರಿ ಆಯುರ್ವೇದ ಹೋಮಿಯೋಪತಿ ಮತ್ತು ಯುನಾನಿ ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ವ್ಯಾಸಂಗ ಮಾಡುತ್ತಿರುವ ಹೌಸ್ ಸರ್ಜನ್ ಮತ್ತು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ದಿನಾಂಕ: 1.4.2000 ರಿಂದ ಜಾರಿಗೆ ಬರುವಂತೆ ಈ ಕೆಳಕಂಡಂತೆ ಮಾಸಿಕ ಶಿಷ್ಯ ವೇತನ ಹೆಚ್ಚಿಸಿ ಮಂಜೂರಾತಿ ನೀಡಲಾಗಿದೆ.

| | | |
|---|---|---|
| 1 | ಹೌಸ್ ಸರ್ಜನ್ ಮಾಸಿಕ | ರೂ. 2,250.00 |
| 2 | ಪ್ರಥಮ ವರ್ಷದ ಸ್ನಾತಕೋತ್ತರ ತರಗತಿಗಳಿಗೆ ಮಾಸಿಕ | ರೂ. 3,100.00 |
| 3 | ದ್ವಿತೀಯ ವರ್ಷದ ಸ್ನಾತಕೋತ್ತರ ತರಗತಿಗಳಿಗೆ ಮಾಸಿಕ | ರೂ. 3,300.00 |
| 4 | ತೃತೀಯ ವರ್ಷದ ಸ್ನಾತಕೋತ್ತರ ತರಗತಿಗಳಿಗೆ ಮಾಸಿಕ | ರೂ. 3,500.00 |

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ ಇವರಿಂದ ಬಂದಿರುವ ಪತ್ರಗಳಲ್ಲಿ ಭಾರತೀಯ ವೈದ್ಯ ಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯಲ್ಲಿನ ಹೌಸ್ ಸರ್ಜನ್ ಮತ್ತು ಸ್ನಾತಕೋತ್ತರ ವಿದ್ಯಾರ್ಥಿಗಳ ಶಿಷ್ಯ ವೇತನ ಹೆಚ್ಚಿಸಿ ಮಂಜೂರಾತಿ ಆದೇಶ ಹೊರಡಿಸಿ 2 ವರ್ಷಕ್ಕೂ ಮೇಲ್ಪಟ್ಟಿರುವುದರಿಂದ ಹಾಲಿ ಅಲೋಪತಿ ಹೌಸ್ ಸರ್ಜನ್‌ಗಳಿಗೆ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ನೀಡುತ್ತಿರುವ ಶಿಷ್ಯವೇತನಕ್ಕೆ ಸಮನಾಗಿ ಶಿಷ್ಯವೇತನ ನೀಡುವಂತೆ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 144 ಪಿಐಎಂ 2003 ಬೆಂಗಳೂರು, ದಿನಾಂಕ: 18ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆಯುರ್ವೇದ, ಹೋಮಿಯೋಪತಿ, ಯುನಾನಿ, ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ವ್ಯಾಸಂಗ ಮಾಡುತ್ತಿರುವ ಹೌಸ್ ಸರ್ಜನ್ ಮತ್ತು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಸರ್ಕಾರಿ ಆದೇಶ ಸಂಖ್ಯೆ:

ಆಕುಕ 152 ಪಿಐಎಂ 99, ದಿನಾಂಕ: 6.6.2000 ರಲ್ಲಿ ನೀಡಲಾಗಿರುವ ಶಿಷ್ಯವೇತನಕ್ಕೆ ಶೇಕಡ 10 ರಷ್ಟು ಬೆಳವಣಿಗೆ ದರ ನೀಡಲು (ಶೇಕಡ 10 ಮಾತ್ರ) (ಪರಿಷ್ಕರಿಸಲು) ಸರ್ಕಾರವು ಮಂಜೂರಾತಿ ನೀಡಲಾಗಿದೆ. ಈ ಪರಿಷ್ಕರಣೆಯಿಂದ ಉಂಟಾಗುವ ಹೆಚ್ಚುವರಿ ವೆಚ್ಚವನ್ನು ಪ್ರಸಕ್ತ ಸಾಲಿನ ಆಯವ್ಯಯದ ಮಿತಿಯಲ್ಲಿಯೇ ಭರಿಸತಕ್ಕದ್ದು. ಯಾವುದೇ ಕಾರಣಕ್ಕೂ ಹೆಚ್ಚುವರಿ ಹಣವನ್ನು ಪ್ರತ್ಯೇಕವಾಗಿ ಬಿಡುಗಡೆ ಮಾಡುವಂತೆ ಕೋರಿಕೆ ಸಲ್ಲಿಸಬಾರದೆಂದು ಷರತ್ತನ್ನು ವಿಧಿಸಲಾಗಿದೆ.

ಈ ವೆಚ್ಚವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

**ಹೌಸ್ ಸರ್ಜನ್‌ಗಳಿಗೆ:**

| | | |
|---|---|---|
| 1 | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು | 2210-05-101-1-13-(ಯೋಜನೇತರ) |
| 2 | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಮೈಸೂರು | 2210-05-101-1-13-(ಯೋಜನೇತರ) |
| 3 | ಸರ್ಕಾರಿ ತಾರಾನಾಥ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬಳ್ಳಾರಿ | 2210-05-101-1-13-(ಯೋಜನೇತರ) |
| 4 | ಸರ್ಕಾರಿ ಯುನಾನಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು | 2210-05-103-1-01-(ಯೋಜನೇತರ) |
| 5 | ಸರ್ಕಾರಿ ಹೋಮಿಯೋಪತಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು | 2210-05-102-0-04-(ಯೋಜನೇತರ) |
| **ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ:** | | |
| 6 | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು | 2210-05-101-1-13-(ಯೋಜನೇತರ) |
| 7 | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಮೈಸೂರು | 2210-05-101-1-13-(ಯೋಜನೇತರ) |
| 8 | ಸರ್ಕಾರಿ ತಾರಾನಾಥ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬಳ್ಳಾರಿ | 2210-05-200-0-04-(ಯೋಜನೆ) |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ:1810:ವೆಚ್ಚ-5:2003, ದಿನಾಂಕ: 21.10.2003 ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚೋಮಾನಾಯಕ್. ಜಿ**

ಪಿ.ಆರ್. 1556

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಗುಲ್ಬರ್ಗಾ ಜಿಲ್ಲೆ, ಸೇಡಂ ತಾಲ್ಲೂಕು ಮೀನಾಹಾಬಾಳ್ ಹತ್ತಿರ ಸೇತುವೆ ಸಹಿತ ಬಂದಾರ ನಿರ್ಮಿಸುವ ಬಗ್ಗೆ.

**ಓದಲಾಗಿದೆ:** 1) ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ದಿನಾಂಕ: 20.1.2003ರ ಪತ್ರ ಸಂಖ್ಯೆ: ಮುಇಂ:ಸನೀ(ಉ)ವ:ವಿಜಾ:ಎಇ-5:02-03:366.

2) ವಿತ್ತ ಮಂತ್ರಾಲಯ, ವೆಚ್ಚಗಳ ಇಲಾಖೆ, ಆರ್ಥಿಕ ಆಯೋಗ ವಿಭಾಗ, ಭಾರತ ಸರ್ಕಾರ ಇವರ ದಿನಾಂಕ: 30.10.2003ರ ಪತ್ರ ಸಂಖ್ಯೆ: ಎಫ್ 9(16) ಎಫ್‌ಸಿಡಿ/2000.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 20.1.2003 ರಂದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಸರ್ಕಾರಕ್ಕೆ ಬರೆದಿರುವ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕಿನ ಮೀನಾಹಬಾಳ್ ಹತ್ತಿರ ಕಾಗಿನಾ ನದಿಗೆ ಅಡ್ಡಲಾಗಿ 11ನೇ ಹಣಕಾಸು ಆಯೋಗದಡಿಯಲ್ಲಿ 550.00 ಲಕ್ಷ ರೂ.ಗಳ ಅಂದಾಜು ವೆಚ್ಚದಲ್ಲಿ (2000-01ನೇ ಸಾಲಿನ ದರಪಟ್ಟಿಯಂತೆ) ಸೇತುವೆ ಸಹಿತ ಬಂದಾರ ನಿರ್ಮಿಸಲು ಅಂದಾಜು ಪತ್ರಿಕೆಯನ್ನು ತಯಾರಿಸಿ ದಿನಾಂಕ: 28.12.2002 ರಂದು ನಡೆದ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯು ಅನುಮೋದನೆ ನೀಡಿರುವುದಾಗಿ ತಿಳಿಸುತ್ತಾ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾಪಿತ ಕಾಮಗಾರಿಯ ಸ್ಥಳವು ಬೀರನಹಳ್ಳಿ ಗ್ರಾಮದಿಂದ 1 ಕಿ.ಮೀ. ಕೆಳಭಾಗದಲ್ಲಿ ಹಾಗೂ ಸೇಡಂ ನಗರದಿಂದ 13 ಕಿ.ಮಿ. ದೂರದಲ್ಲಿದೆ. ಪ್ರಸ್ತಾಪಿತ ಯೋಜನೆಯು 70 ಚ.ಮೀ. ಜಲಾನಯನ ಪ್ರದೇಶ ಹೊಂದಿದೆ. 1 ಮೀ. ಅಗಲದ 67 ಮೂಲ ಕಂಬಗಳನ್ನು ಒಳಗೊಂಡ 230 ಮೀಟರ್ ಉದ್ದದ ಹಾಗೂ 4.50 ಮೀ. ಎತ್ತರದ ಸೇತುವೆಯ ಸಹಿತ ಬಂದಾರವನ್ನು ನಿರ್ಮಿಸಲು ಯೋಜಿಸಿದೆ. ಎರಡೂ ಬದಿಗಳಲ್ಲಿ ಕರ್ಬ್ ಒಳಗೊಂಡಂತೆ ಸೇತುವೆ ಅಗಲವು 5.25 ಮೀ. ಆಗುತ್ತದೆ. ಪ್ರಸ್ತಾಪಿತ ಬ್ಯಾರೇಜ್ ನಿರ್ಮಿಸುವುದರಿಂದ 2.36 ದಶ ಲಕ್ಷ ಘನ ಮೀಟರ್ ನೀರನ್ನು ಸಂಗ್ರಹಿಸಿ 1037 ಹೆಕ್ಟೇರಿನ ಜಮೀನಿಗೆ ನೀರಾವರಿ ಸೌಲಭ್ಯ ಕಲ್ಪಿಸಲು ಉದ್ದೇಶಿಸಲಾಗಿದೆ. ಈ ಉದ್ದೇಶಿತ ಯೋಜನೆಯಿಂದ ಮೀನಾಹಾಬಾಳ್ ಹಾಗೂ ಅಕ್ಕಪಕ್ಕದ ಗ್ರಾಮದ ಜನರಿಗೆ ಅನುಕೂಲವಾಗುತ್ತದೆ. ವ್ಯವಸಾಯದ ತೀವ್ರತೆಯು ಶೇ. 160 ರಷ್ಟು ಆಗಿದ್ದು, ಕುಡಿಯುವ ನೀರಿನ ಸಲುವಾಗಿ 0.11 ದಶ ಲಕ್ಷ ಘನ ಮೀಟರ್ ಹಾಗೂ ವ್ಯವಸಾಯಕ್ಕೆ 2.25 ದಶ ಲಕ್ಷ ಘನ ಮೀಟರ್‌ಗಳಷ್ಟು ನೀರು ಬೇಕಾಗುವುದೆಂದು ಲೆಕ್ಕಾಚಾರ ಮಾಡಲಾಗಿದೆ. ಬ್ಯಾರೇಜಿನ ನಿರ್ಮಾಣದಿಂದ ನದಿಯ ಮೇಲ್ಭಾಗದ ಪಾತ್ರದಲ್ಲಿ 5.08 ಕಿ.ಮೀ. ರವರೆಗೆ ಹಿನ್ನೀರು ಶೇಖರಣೆಯಾಗುವುದರಿಂದ 34.80 ಹೆಕ್ಟೇರಿನಷ್ಟು ಭೂಮಿಯು ಮುಳುಗಡೆಯಾಗಲಿದೆ ಎಂದು ಮುಖ್ಯ ಇಂಜಿನಿಯರ್‌ರವರು ವರದಿ ಮಾಡಿರುತ್ತಾರೆ.

11ನೇ ಹಣಕಾಸು ಆಯೋಗದ ಶಿಫಾರಸ್ಸಿನಂತೆ ಕೇಂದ್ರ ಸರ್ಕಾರದಿಂದ ಅನುದಾನವನ್ನು ಪಡೆಯಲು ರಾಜ್ಯಮಟ್ಟದ ಅಧಿಕಾರಯುಕ್ತ ಸಮಿತಿಯ 6ನೇ ಸಭೆಯು ದಿನಾಂಕ: 9.9.2003 ರಂದು ನಡೆದಿದ್ದು, ಸದರಿ ಸಭೆಯಲ್ಲಿ 11ನೇ ಹಣಕಾಸು ಆಯೋಗದಡಿಯಲ್ಲಿ ಕೈಗೊಳ್ಳಲಾಗುವ ಕಾಮಗಾರಿಗಳಿಗೆ ಪರಿಷ್ಕೃತ ಕ್ರಿಯಾ ಯೋಜನೆಯನ್ನು ತಯಾರಿಸಿ ಕೇಂದ್ರ ಸರ್ಕಾರಕ್ಕೆ ಸಲ್ಲಿಸಿದ್ದು, ಕೇಂದ್ರ ಸರ್ಕಾರದ ಅನುಮೋದನೆಯನ್ನು ಬಾಕಿ ಇರಿಸಿ ಅಂದಾಜುಗಳನ್ನು ತಯಾರಿಸಲು ಹಾಗೂ ಕಾಮಗಾರಿಗಳಿಗೆ ಟೆಂಡರನ್ನು

ಕರೆಯಬಹುದೆಂದು ತೀರ್ಮಾನಿಸಲಾಗಿರುತ್ತದೆ. ಮೇಲೆ (2)ರಲ್ಲಿ ಓದಲಾದ ಕೇಂದ್ರ ಸರ್ಕಾರದ ಆರ್ಥಿಕ ಸಚಿವಾಲಯದ ದಿನಾಂಕ: 30.10.2003 ರ ಪತ್ರದಲ್ಲಿ ಪರಿಷ್ಕೃತ ಕ್ರಿಯಾ ಯೋಜನೆಯನ್ನು ಅನುಮೋದಿಸಿರುವುದಾಗಿ ತಿಳಿಸಿ ಅದರಂತೆ ಯೋಜನೆಯನ್ನು ಜಾರಿಗೊಳಿಸಲು ಸೂಚಿಸಲಾಗಿದೆ.

ಈ ಯೋಜನೆಯನ್ನು ರಾಜ್ಯದ ಬರಪೀಡಿತ ಪ್ರದೇಶದಲ್ಲಿ ಪ್ರಸ್ತಾಪಿಸಲಾಗಿದೆ. ಪ್ರತಿ ಹೆಕ್ಟೇರಿನ ವ್ಯವಸಾಯದ ಪ್ರದೇಶವನ್ನು ನೀರಾವರಿಗೆ ಒಳಪಡಿಸಲು 0.53 ಲಕ್ಷ ರೂ. ವೆಚ್ಚವಾಗಲಿದೆ. ಯೋಜನೆಯ ಲಾಭ ವೆಚ್ಚದ ಅನುಪಾತವು ಶೇ. 10ರ ಬಡ್ಡಿಯಂತೆ 1.32 ಆಗಿರುವುದರಿಂದ ಯೋಜನೆಯ ಆರ್ಥಿಕವಾಗಿ ಶಕ್ಯವಾಗಿದೆ.

ವಿಷಯವನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 161 ಏನೀಯೋ 2002, ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ಹೇಳಿರುವ ಸನ್ನಿವೇಶಗಳಿಂದಾಗಿ ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನ ಮೀನಾಹಬಾಳ ಹತ್ತಿರ 11ನೇ ಹಣಕಾಸು ಆಯೋಗದ ಅನುದಾನದಡಿ ಸೇತುವೆ ಸಹಿತ ಬಂದಾರವನ್ನು ನಿರ್ಮಿಸುವ ಕಾಮಗಾರಿಯ 550.00 ಲಕ್ಷ ರೂ.ಗಳ (ಐನೂರ ಐವತ್ತು ಲಕ್ಷ ರೂ.ಗಳು ಮಾತ್ರ) ಅಂದಾಜು ಪಟ್ಟಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1. ಈ ಕಾಮಗಾರಿಯ ವೆಚ್ಚವು ಅನುಮತಿ ನೀಡಿರುವ ಅಂದಾಜು ಮೊತ್ತಕ್ಕಿಂತ ಯಾವ ಕಾರಣಕ್ಕೂ ಹೆಚ್ಚಾಗದಂತೆ ಎಚ್ಚರ ವಹಿಸತಕ್ಕದ್ದು.
2. ಕಾಮಗಾರಿಯ ಸಣ್ಣ ನೀರಾವರಿ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯು ದಿನಾಂಕ: 28.12.2002ರ ಸಭೆಯ ನಡವಳಿಗಳಲ್ಲಿ ಸೂಚಿಸಿರುವ ಸೂಚನೆಗಳನ್ನು ಚಾಚೂ ತಪ್ಪದೇ ಪಾಲಿಸತಕ್ಕದ್ದು.
3. ಈ ಕಾಮಗಾರಿಯನ್ನು ದಿನಾಂಕ: 31.3.2005 ರ ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಪಿಡಬ್ಲ್ಯೂಡಿ 986 ಎಫ್‌ಸಿ-1/2003, ದಿನಾಂಕ: 11.11.2003 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ.ಜಿ. ಪ್ರಸಾದ್**

ಪಿ.ಆರ್. 1557

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಶಿಕ್ಷಣ ಸಚಿವಾಲಯ

**ವಿಷಯ:** ಎನ್.ಟಿ.ಟಿ.ಎಫ್, ಬೆಂಗಳೂರು ಡಿಪ್ಲೋಮಾ ಇನ್ ಕಂಪ್ಯೂಟರ್ ಇಂಜಿನಿಯರಿಂಗ್ ಮತ್ತು ಇನ್‌ಫರ್ಮೇಷನ್ ಟೆಕ್ನಾಲಜಿ ಕೋರ್ಸುಗಳಿಗೆ ಮನ್ನಣೆ ನೀಡುವ ಬಗ್ಗೆ ಆದೇಶ.

**ಓದಲಾಗಿದೆ:** 1) ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ: ಡಿಟಿಇ 67 ಸಿಡಿಸಿ 2002-03:2756, ದಿನಾಂಕ: 15.9.2003.
2) ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ: ಡಿಟಿಇ 67 ಸಿಡಿಸಿ-02-03:3073, ದಿನಾಂಕ: 13.10.2003.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಬೆಂಗಳೂರಿನ ನೆಟ್ಟೂರ್ ಟೆಕ್ನಿಕಲ್ ಟ್ರೈನಿಂಗ್ ಫೌಂಡೇಷನ್ ಇವರು ನಡೆಸುತ್ತಿರುವ ಡಿಪ್ಲೋಮಾ ಇನ್ ಕಂಪ್ಯೂಟರ್ ಇಂಜಿನಿಯರಿಂಗ್ ಮತ್ತು ಇನ್‌ಫರ್ಮೇಷನ್ ಟೆಕ್ನಾಲಜಿ ಕೋರ್ಸುಗಳಿಗೆ ಮನ್ನಣೆ ನೀಡುವ ಬಗ್ಗೆ ಪ್ರಸ್ತಾವನೆಯನ್ನು ಕಳುಹಿಸಿ ಇದಕ್ಕೆ ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯ ಮಾನ್ಯತೆ ನೀಡಬೇಕೆಂದು ಮನವಿ ಮಾಡಿರುತ್ತಾರೆ. ಈ ಬಗ್ಗೆ ತಜ್ಞರಿಗೆ ಪಠ್ಯ ಕ್ರಮವನ್ನು ಕಳುಹಿಸಿ ಇದರ ಉಪಯುಕ್ತತೆ ಬಗ್ಗೆ ವರದಿ ಸಲ್ಲಿಸುವಂತೆ ಕೋರಲಾಗಿತ್ತು. ಈ ಬಗ್ಗೆ ತಜ್ಞರು ನೀಡಿರುವ ವರದಿಯನ್ನು ದಿನಾಂಕ: 27.12.2002 ರಂದು ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯ 133ನೇ ಸಭೆಯಲ್ಲಿ ಚರ್ಚಿಸಲು ಮಂಡಿಸಲಾಗಿತ್ತೆಂತಲೂ, ಸಭೆಯಲ್ಲಿ ಇದರ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಿದ್ದು, ಎನ್.ಟಿ.ಟಿ.ಎಫ್ ನವರು ನಡೆಸುವ ಕಂಪ್ಯೂಟರ್ ಇಂಜಿನಿಯರಿಂಗ್ ಮತ್ತು ಇನ್‌ಫರ್ಮೇಷನ್ ಟೆಕ್ನಾಲಜಿ ಡಿಪ್ಲೋಮಾ ಕೋರ್ಸು ಪಠ್ಯ ಕ್ರಮಗಳು ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕಂಪ್ಯೂಟರ್ ಮತ್ತು ಇಂಜಿನಿಯರಿಂಗ್ ಹಾಗೂ ಇನ್‌ಫರ್ಮೇಷನ್ ಟೆಕ್ನಾಲಜಿ ಡಿಪ್ಲೋಮಾ ಕೋರ್ಸುಗಳ ಪಠ್ಯ ಕ್ರಮಗಳಿಗೆ ಅನುಕ್ರಮವಾಗಿ ಸಮಾನವಾಗಿದೆ ಎಂದೂ ಸಿ.ಡಿ. ಸೆಲ್ ನವರು ತಿಳಿಸಿರುತ್ತಾರೆಂತಲೂ, ಆದುದರಿಂದ, ಇದನ್ನು ಉದ್ಯೋಗಾವಕಾಶಕ್ಕೆ ಮಾತ್ರ ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಡಿಪ್ಲೋಮಾ ಕೋರ್ಸುಗಳಿಗೆ ಸಮಾನವೆಂದು ಪರಿಗಣಿಸುವಂತೆ ಸರ್ಕಾರದ ಆದೇಶ ಹೊರಡಿಸಲು ಕೋರಿದ್ದಾರೆ.

ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 330 ಟಿಪಿಇ 2003, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2003**

ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ಎನ್.ಟಿ.ಟಿ.ಎಫ್, ಬೆಂಗಳೂರು ನವರು ನಡೆಸುವ ಕಂಪ್ಯೂಟರ್ ಇಂಜಿನಿಯರಿಂಗ್ ಮತ್ತು ಇನ್‌ಫರ್‌ಮೇಷನ್ ಟೆಕ್ನಾಲಜಿ ಕೋರ್ಸು ಪಠ್ಯ ಕ್ರಮಗಳು ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕಂಪ್ಯೂಟರ್ ಸೈನ್ಸ್ ಮತ್ತು ಇಂಜಿನಿಯರಿಂಗ್ ಹಾಗೂ ಇನ್‌ಫರ್‌ಮೇಷನ್ ಟೆಕ್ನಾಲಜಿ ಡಿಪ್ಲೋಮಾ ಕೋರ್ಸುಗಳ ಪಠ್ಯ ಕ್ರಮಗಳಿಗೆ ಅನುಕ್ರಮವಾಗಿ ಸಮಾನವಾಗಿರುವುದರಿಂದ, ಈ

ಕೋರ್ಸುಗಳನ್ನು ಉದ್ಯೋಗಾವಕಾಶಕ್ಕೆ ಮಾತ್ರ ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಡಿಪ್ಲೋಮಾ ಕೋರ್ಸುಗಳಿಗೆ ಸಮಾನವೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ವೇಣುಗೋಪಾಲ್**

ಪಿ.ಆರ್. 1558

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ.

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಡೆಕ್ಕನ್ ಏವಿಯೇಷನ್ ಸಂಸ್ಥೆಯನ್ನು ಪ್ರಾದೇಶಿಕ ವಿಮಾನಯಾನ ಸಂಸ್ಥೆ ಎಂದು ಘೋಷಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 5 ಎಸ್‌ಆರ್‌ಎ 2003, ದಿನಾಂಕ: 25.8.2003.
2) ದಿನಾಂಕ: 18.9.2003ರ ಕ್ರಮಾಂಕ: ಎಫ್‌ಡಿ 710, ಸೇ-4:2003ರ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ.

**ಪ್ರಸ್ತಾವನೆ:**

ಮಾನ್ಯ ಮುಖ್ಯಮಂತ್ರಿಗಳ 2003-04ನೇ ಸಾಲಿನ ಆಯವ್ಯಯದ ಭಾಷಣದ ಕಂಡಿಕೆ 164ರಲ್ಲಿ ಈ ಕೆಳಕಂಡಂತೆ ಘೋಷಿಸಲಾಗಿದೆ.

"ಹೊಸ ಪ್ರಾದೇಶಿಕ ಸ್ಥಳಗಳಿಗೆ ವಿಮಾನ ಸೇವೆಯನ್ನು ನಡೆಸುತ್ತಿರುವ ಪ್ರಾದೇಶಿಕ ವಿಮಾನ ಸಂಸ್ಥೆಗಳು ಅವುಗಳ ಕಾರ್ಯಾಚರಣೆಯನ್ನು ವಿಸ್ತರಿಸಲು ಮತ್ತು ರಾಜ್ಯದ ಪ್ರಮುಖ ಪ್ರವಾಸಿ ಮತ್ತು ಕೈಗಾರಿಕ ಕೇಂದ್ರಗಳಿಗೆ ವಿಮಾನ ಸೇವೆ ಸೌಲಭ್ಯ ಒದಗಿಸುವುದನ್ನು ಉತ್ತೇಜಿಸಲು ಅವುಗಳು ಉಪಯೋಗಿಸುವ ವೈಮಾನಿಕ ಇಂಧನದ ಮೇಲಿನ ಮಾರಾಟ ತೆರಿಗೆಯನ್ನು ಕೂಡ ಶೇಕಡ 4ಕ್ಕೆ ಇಳಿಸಲು ಮತ್ತು ಮುಖ್ಯವಾಗಿ ಮೈಸೂರು ಹುಬ್ಬಳ್ಳಿ, ಬಳ್ಳಾರಿ, ಹೊಸಪೇಟೆ, ಗುಲ್ಬರ್ಗಾ ಮತ್ತು ಬೆಳಗಾಂನಂತಹ ಸ್ಥಳಗಳಿಗೆ ಪ್ರಾದೇಶಿಕ ವಿಮಾನ ಸೇವೆ ಪ್ರಾರಂಭವನ್ನು ನಿರೀಕ್ಷಿಸಲಾಗಿದೆ".

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 25.8.2003ರ ಆದೇಶದಲ್ಲಿ ರೂ. 11,520.00 ಮತ್ತು ಅದಕ್ಕೂ ಹೆಚ್ಚಿನ ವೇತನ ಪಡೆಯುತ್ತಿರುವ ಅಧಿಕಾರಿಗಳಿಗೆ, ರಾಜ್ಯ ಸರ್ಕಾರವು ಕಾಲಕಾಲಕ್ಕೆ ಪ್ರಾದೇಶಿಕ ಸೇವೆಯನ್ನು ಘೋಷಿಸುವ ಯಾವುದೇ ಪ್ರಾದೇಶಿಕ ವಿಮಾನಗಳಲ್ಲಿ ಪ್ರಯಾಣ ಮಾಡಲು ಸರ್ಕಾರವು ಅನುಮತಿಸಿದೆ.

ಏರ್ ಡೆಕ್ಕನ್ ಸಂಸ್ಥೆಯು ಕರ್ನಾಟಕದಲ್ಲಿ ಪ್ರಾದೇಶಿಕ ವಿಮಾನಯಾನ ಸೇವೆಯನ್ನು ದಿನಾಂಕ: 26.8.2003 ರಿಂದ ಪ್ರಾರಂಭಿಸಿದೆ. ಈ ಪ್ರಾದೇಶಿಕ ವಿಮಾನ ಯಾನ ಸೇವೆಯಲ್ಲಿ ಮೇಲೆ ಹೇಳಿದಂತ ಅಧಿಕಾರಿಗಳು ಪ್ರಯಾಣಿಸುವುದನ್ನು ಉತ್ತೇಜಿಸಲು ಏರ್ ಡೆಕ್ಕನ್ ಸಂಸ್ಥೆಯನ್ನು ಪ್ರಾದೇಶಿಕ ವಿಮಾನಯಾನ ಸೇವೆ ಎಂದು ಘೋಷಿಸಲು ಕ್ರಮ ತೆಗೆದುಕೊಳ್ಳಬೇಕೆಂದು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯನ್ನು ಕೋರಿದೆ. ಆದ್ದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮೂಅಇ 58 ರಾಅವಿ 2003, ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸನ್ನಿವೇಶಗಳಲ್ಲಿ, ಏರ್ ಡೆಕ್ಕನ್ ಸಂಸ್ಥೆಯನ್ನು ಪ್ರಾದೇಶಿಕ ವಿಮಾನಯಾನ ಸೇವೆ ಸಂಸ್ಥೆಯೆಂದು ದಿನಾಂಕ: 26.8.2003 ರಿಂದ ಜಾರಿಗೆ ಬರುವಂತೆ (ರೀಜನಲ್ ಏರ್ ಲೈನ್) ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಬಿ. ರೇಣುಕಾಪ್ರಸಾದ್**

ಪಿ.ಆರ್. 1559

ಸರ್ಕಾರದ ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಎ. ಆನಂದ್, ಜಂಟಿ ನಿರ್ದೇಶಕರು (ಅಮಾನತ್ತಿನಲ್ಲಿ) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಕೋರಮಂಗಲ ಬಡಾವಣೆಯ ಕೃಷ್ಣಾ ಬ್ಲಾಕ್‌ನ ವಸತಿ ಗೃಹ ಸಂಖ್ಯೆ: 120ನ್ನು ಉಪಬಾಡಿಗೆ ನೀಡಿದ ಬಗ್ಗೆ ಹಾಗೂ ಈ ವಸತಿ ಗೃಹವನ್ನು ಉಪಬಾಡಿಗೆ ಪಡೆದ ಶ್ರೀಮತಿ ನಿಶಾತ್ ಆಯೇಷಾ, ಕೈಗಾರಿಕಾ ವಿಸ್ತರಣಾಧಿಕಾರಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ತಾಲ್ಲೂಕು ಪಂಚಾಯತ್, ಕನಕಪುರ, ಇವರುಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ವಿಚಾರಣೆಯನ್ನು ಏರ್ಪಡಿಸುವ ಕುರಿತು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಉಲ್ಲೇಖ:**
1) ಲೋಕೋಪಯೋಗಿ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಲೋಇ 13 ಪಿಪಿಎಂ 2002, ದಿನಾಂಕ: 26.2.2002.
2) ಶ್ರೀ ಎ. ಆನಂದ್, ಜಂಟಿ ನಿರ್ದೇಶಕರು (ಅಮಾನತ್ತಿನಲ್ಲಿ) ಅವರಿಗೆ ಹೊರಡಿಸಲಾಗಿದ್ದ ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ವಾಕೈ 40 ಕೈಸೇವಿ 2002(1), ದಿನಾಂಕ: 12.3.2003.
3) ಶ್ರೀಮತಿ ನಿಶಾತ್ ಆಯೇಷಾ, ಕೈಗಾರಿಕಾ ವಿಸ್ತರಣಾಧಿಕಾರಿ, ಅವರಿಗೆ ಹೊರಡಿಸಲಾಗಿದ್ದ ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ವಾಕೈ 40 ಕೈಸೇವಿ 2002, ದಿನಾಂಕ: 24.1.2003.

4) ಶ್ರೀ ಎ. ಆನಂದ್, ಜಂಟಿ ನಿರ್ದೇಶಕರು (ಅಮಾನತ್ತಿನಲ್ಲಿ), ಇವರು ದಿನಾಂಕ: 18.7.2003 ರಂದು ಸಲ್ಲಿಸಿರುವ ಲಿಖಿತ ರಕ್ಷಣಾ ಹೇಳಿಕೆ.
5) ಶ್ರೀಮತಿ ನಿಶಾತ್ ಆಯೇಷಾ, ಕೈಗಾರಿಕಾ ವಿಸ್ತರಣಾಧಿಕಾರಿ (ಅಮಾನತ್ತಿನಲ್ಲಿ), ಅವರು ದಿನಾಂಕ: 7.2.2003 ರಂದು ಸಲ್ಲಿಸಿರುವ ಲಿಖಿತ ರಕ್ಷಣಾ ಹೇಳಿಕೆ.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 26.2.2002ರ ಅನಧಿಕೃತ ಟಿಪ್ಪಣಿಯಲ್ಲಿ ಶ್ರೀ ಎ. ಆನಂದ್, ಇವರು ಉಪನಿರ್ದೇಶಕರಾಗಿ ಶೈಮಗ್ಗ ಮತ್ತು ಜವಳಿ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಇವರಿಗೆ ಬೆಂಗಳೂರಿನ ಕೋರಮಂಗಲ ಬಡಾವಣೆಯ ಕೃಷ್ಣಾ ಬ್ಲಾಕ್‌ನ ವಸತಿ ಗೃಹ ಸಂಖ್ಯೆ 120ನ್ನು ಬಾಡಿಗೆ ಆಧಾರದ ಮೇಲೆ ಹಂಚಿಕೆ ಮಾಡಲಾಗಿತ್ತೆಂದೂ ಅವರು ಆ ವಸತಿಗೃಹವನ್ನು ಶ್ರೀಮತಿ ನಿಶಾತ್ ಆಯೇಷಾ, ಕೈಗಾರಿಕಾ ವಿಸ್ತರಣಾಧಿಕಾರಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರಿಗೆ ಉಪಬಾಡಿಗೆ ನೀಡಿದ್ದು, ಶ್ರೀ ಎ. ಆನಂದ್, ಇವರು ಸರ್ಕಾರಿ ವಸತಿಗೃಹ ಹಂಚಿಕೆ ನಿಯಮಾವಳಿಗಳನ್ನು ಉಲ್ಲಂಘಿಸಿರುವುದರಿಂದ, ಕರ್ನಾಟಕ ಸರ್ಕಾರ (ಸರ್ಕಾರಿ ವಸತಿ ಗೃಹಗಳ ಹಂಚಿಕೆ) ನಿಯಮಗಳು 1999ರ ನಿಯಮ 22ರ ಪ್ರಕಾರ ಕೆ.ಸಿ.ಎಸ್. (ಸಿಸಿಎ) ನಿಯಮಗಳ ಮೇರೆಗೆ ಶಿಸ್ತು ಕ್ರಮಕ್ಕೆ ಒಳಪಡಿಸಲು ಲೋಕೋಪಯೋಗಿ ಇಲಾಖೆಯು ತಿಳಿಸಿತ್ತು.

ಮೇಲೆ ಓದಲಾದ ಕ್ರಮಸಂಖ್ಯೆ (2) ರಲ್ಲಿ ಶ್ರೀ ಎ. ಆನಂದ್, ಜಂಟಿ ನಿರ್ದೇಶಕರು (ಅಮಾನತ್ತಿನಲ್ಲಿ), ಇವರಿಗೆ ಆರೋಪಗಳಿಗೆ ಸಂಬಂಧಪಟ್ಟಂತೆ ದಿನಾಂಕ: 12.3.2003 ರಂದು ದೋಷಾರೋಪಣಾ ಪಟ್ಟಿಯನ್ನು ಹೊರಡಿಸಲಾಗಿತ್ತು ಮತ್ತು ಕ್ರಮ ಸಂಖ್ಯೆ (3) ರಲ್ಲಿ ಶ್ರೀಮತಿ ನಿಶಾತ್ ಆಯೇಷಾ, ಕೈಗಾರಿಕಾ ವಿಸ್ತರಣಾಧಿಕಾರಿ, ಇವರಿಗೆ ಅವರ ವಿರುದ್ಧದ ಆರೋಪಗಳಿಗೆ ಸಂಬಂಧಿಸಿದಂತೆ ದಿನಾಂಕ: 24.1.2003 ರಂದು ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ಶ್ರೀ ಎ. ಆನಂದ್, ಇವರು ತಮ್ಮ ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿ, ಬಾಡಿಗೆ ಆಧಾರದ ಮೇಲೆ ಲೋಕೋಪಯೋಗಿ ಇಲಾಖೆಯಿಂದ ವಸತಿಗೃಹವನ್ನು ಪಡೆದಿರುವುದನ್ನು ಒಪ್ಪಿ, ಅವರ ಚಿರಪರಿಚಿತ ಸಹೋದ್ಯೋಗಿಯಾಗಿದ್ದ ಶ್ರೀಮತಿ ನಿಶಾತ್ ಆಯೇಷಾ, ಕೈಗಾರಿಕಾ ವಿಸ್ತರಣಾಧಿಕಾರಿ, ಇವರು ತಮಗೆ ಹಂಚಿಕೆಯಾಗಿದ್ದ ವಸತಿ ಗೃಹದಲ್ಲಿ ಸ್ವಲ್ಪ ಸಮಯ ತಂಗಲು ಅವಕಾಶ ಕೋರಿದ ಮೇರೆಗೆ ಮಾನವೀಯ ದೃಷ್ಟಿಯಿಂದ ಆ ವಸತಿ ಗೃಹವನ್ನು ನೀಡಿರುವುದಾಗಿಯೂ ತಿಳಿಸಿ ಉಪಬಾಡಿಗೆ ನೀಡಿರುವ ಬಗ್ಗೆ ಆಧಾರವಿಲ್ಲವೆಂದೂ, ಆರೋಪವನ್ನು ನಿರಾಕರಿಸಿದ್ದಾರೆ. ನಂತರ ಶ್ರೀಮತಿ ನಿಶಾತ್ ಆಯೇಷಾರವರು ಮನೆಯನ್ನು ಖಾಲಿ ಮಾಡಲು ಹಣ ಕೇಳಿದ ಮೇರೆಗೆ ತಾವೇ ಈ ಬಗ್ಗೆ ಲೋಕೋಪಯೋಗಿ ಇಲಾಖೆಗೆ ವರದಿ ನೀಡಿದರೆಂದೂ, ಆದರೆ ಲೋಕೋಪಯೋಗಿ ಇಲಾಖೆಯು ತರಾತುರಿಯಲ್ಲಿ ಉಪಬಾಡಿಗೆ ನೀಡಿದ್ದೇನೆಂದು ವರದಿ ನೀಡಿದೆ ಎಂದು ತಿಳಿಸಿದ್ದರು.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರಲ್ಲಿ ಶ್ರೀಮತಿ ನಿಶಾತ್ ಆಯೇಷಾ, ಕೈಗಾರಿಕಾ ವಿಸ್ತರಣಾಧಿಕಾರಿ, ಇವರು ದಿನಾಂಕ: 7.2.2003 ರಂದು ಸಲ್ಲಿಸಿದ ಲಿಖಿತ ರಕ್ಷಣಾ ಹೇಳಿಕೆಯಲ್ಲಿ ದೋಷಾರೋಪಣಾ ಪಟ್ಟಿಯಲ್ಲಿದ್ದ ಆರೋಪಗಳನ್ನು ಅಲ್ಲಗಳೆದು ತಾವು ಶ್ರೀ ಎ. ಆನಂದ್, ಇವರನ್ನು ದಿನಾಂಕ: 13.6.1994 ರಂದು ಮದುವೆ ಆಗಿರುವುದಾಗಿ ತಿಳಿಸಿ ತಾವು ತಮ್ಮ ಪತಿಗೆ ಹಂಚಿಕೆಯಾದ ಮನೆಯಲ್ಲಿ ವಾಸಿಸುತ್ತಿರುವುದಾಗಿ ತಿಳಿಸಿದ್ದರು.

ಆಪಾದಿತ ಅಧಿಕಾರಿಗಳ ಹೇಳಿಕೆಗಳು ಸಮರ್ಥನೀಯವಾಗಿಲ್ಲವಾದ್ದರಿಂದ ಮತ್ತು ಅಧಿಕಾರಿಗಳು ವಸತಿಗೃಹಗಳ ಹಂಚಿಕೆ ನಿಯಮಗಳನ್ನು ಉಲ್ಲಂಘಿಸಿರುವುದಲ್ಲದೆ ಕೆ.ಸಿ.ಎಸ್ (ನಡತೆ) ನಿಯಮಾವಳಿಗಳನ್ವಯ ನಿಯಮ (3)ನ್ನು ಉಲ್ಲಂಘಿಸಿರುವುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಆದುದರಿಂದ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ವಿಚಾರಣೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 40 ಐಸಿಎಸ್ 2002, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಸ್ಥೂಲವಾಗಿ ಪರಿಶೀಲಿಸಿದ ನಂತರ ಶ್ರೀ ಎ. ಆನಂದ್ ಜಂಟಿ ನಿರ್ದೇಶಕರು (ಅಮಾನತ್ತಿನಲ್ಲಿ) ಹಾಗೂ ಶ್ರೀಮತಿ ನಿಶಾತ್ ಆಯೇಷಾ, ಕೈಗಾರಿಕಾ ವಿಸ್ತರಣಾಧಿಕಾರಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಈ ಇಬ್ಬರೂ ನೌಕರರುಗಳು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಸರ್ಕಾರಿ ವಸತಿಗೃಹಗಳ ಹಂಚಿಕೆ ನಿಯಮಗಳನ್ನು ಮತ್ತು ನಡತೆ ನಿಯಮಗಳನ್ನು ಉಲ್ಲಂಘಿಸಿ, ಸರ್ಕಾರಿ ನೌಕರರಿಗೆ ಸಲ್ಲದ ಕೃತ್ಯವನ್ನು ಎಸಗಿದ್ದಾರೆಂಬ ಆರೋಪಗಳ ಬಗ್ಗೆ ಕೆ.ಸಿ.ಎಸ್. (ಸಿಸಿಎ) ನಿಯಮಗಳು 1957ರ ನಿಯಮ 11ರ ಉಪ ನಿಯಮ (5)ನ್ನು ಓದಿಕೊಂಡಂತೆ ಅದೇ ನಿಯಮದ ಉಪ ನಿಯಮ (2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಪ್ರಕರಣದಲ್ಲಿ ಜಂಟಿ ವಿಚಾರಣೆಯನ್ನು ನಡೆಸಲು ಶ್ರೀ ಕೆ.ಎಂ. ವೈದ್ಯ, ಮಾನ್ಯ ನಿವೃತ್ತ ನ್ಯಾಯಾಧೀಶರು, ನಂ. 3ಎ, ಆರ್.ಎಂ.ವಿ. 2ನೇ ಹಂತ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ. ಸದರಿ ವಿಚಾರಣೆಯನ್ನು ಮೂರು ತಿಂಗಳಿನೊಳಗಾಗಿ ಪೂರ್ಣಗೊಳಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ನಿರ್ದೇಶಿಸಲಾಗಿದೆ. ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕೆ.ಸಿ.ಎಸ್. (ಸಿಸಿಎ) ನಿಯಮಗಳು 1957ರ ನಿಯಮ 11(5)(ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಉಪನಿರ್ದೇಶಕರು (ಹಣಕಾಸು), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ನಿರ್ದೇಶಕರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿರುವ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಒದಗಿಸಲು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ:ಬೆರಳಚ್ಚುಗಾರರ ಸಹಾಯವನ್ನು ಮತ್ತು ಲೇಖನ ಸಾಮಗ್ರಿಗಳನ್ನು ಒದಗಿಸಲು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರಿಗೆ ಸೂಚಿಸಲಾಗಿದೆ.

ಈ ಪ್ರಕರಣದ ವಿಚಾರಣೆಗಾಗಿ ರೂ. 5,000.00 (ರೂಪಾಯಿ ಐದು ಸಾವಿರಗಳು ಮಾತ್ರ) ಮತ್ತು ವಾಹನ ಭತ್ಯೆ ರೂ. 1,000.00 (ರೂಪಾಯಿ ಒಂದು ಸಾವಿರಗಳು ಮಾತ್ರ) ಸಂಚಿತ ಸಂಭಾವನೆಗಳನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ಕೈಗಾರಿಕಾಭಿವೃದ್ಧಿ ಆಯುಕ್ತರೇ ಪಾವತಿ ಮಾಡುವುದು.

ವಿಚಾರಣಾಧಿಕಾರಿಗಳು ಮೂರು ತಿಂಗಳೊಳಗಾಗಿ ವಿಚಾರಣೆಯನ್ನು ಪೂರೈಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಪಿ.ಆರ್. 1560 ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ. (ಕೈಗಾರಿಕಾ ಸೇವೆಗಳು)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಗ್ರಾಮೀಣ ಕೃಪಾಂಕದ ಅಡಿಯಲ್ಲಿ ಆಯ್ಕೆಗೊಂಡು ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲ್ಪಟ್ಟ ದಂತ ಆರೋಗ್ಯಾಧಿಕಾರಿಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಆಕುಕ 939 ಹೆಚ್‌ಎಸ್‌ಹೆಚ್ 2003, ದಿನಾಂಕ: 17.12.2003.

**ಪ್ರಸ್ತಾವನೆ:**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಗ್ರಾಮೀಣ ಕೃಪಾಂಕದ ಆಧಾರದ ಮೇಲೆ ನೇಮಕಾತಿಗೊಂಡು ಸೇವೆ ಸಲ್ಲಿಸಿದ ದಂತ ಆರೋಗ್ಯಾಧಿಕಾರಿಗಳನ್ನು ಮೇಲೆ ಓದಲಾದ ದಿನಾಂಕ: 17.12.2003 ರ ಆದೇಶದನ್ವಯ ಸರ್ಕಾರಿ ಸೇವೆಯಿಂದ ತೆಗೆದುಹಾಕಲಾಗಿದ್ದು, ಈ ರೀತಿ ವೈದ್ಯಾಧಿಕಾರಿಗಳನ್ನು ಸೇವೆಯಿಂದ ತೆಗೆದುಹಾಕಿರುವುದರಿಂದ ಗ್ರಾಮೀಣ ಪ್ರದೇಶದಲ್ಲಿನ ಸಾರ್ವಜನಿಕರು ವೈದ್ಯಕೀಯ ಸೌಲಭ್ಯದಿಂದ ವಂಚಿತರಾಗುವುದನ್ನು ಸರ್ಕಾರವು ಮನಗೊಂಡು ಮೇಲಿನ ಆದೇಶದಲ್ಲಿ ಸೇವೆಯಿಂದ ತೆಗೆದುಹಾಕಿರುವ ದಂತ ಆರೋಗ್ಯಾಧಿಕಾರಿಗಳನ್ನು ಮುಂದಿನ ಆದೇಶದವರೆಗೆ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳಲು ತೀರ್ಮಾನಿಸಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 939 ಹೆಚ್‌ಎಸ್‌ಹೆಚ್ 2003, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಆಕುಕ 939 ಹೆಚ್‌ಎಸ್‌ಹೆಚ್ 2003, ದಿನಾಂಕ: 17.12.2003 ರನ್ವಯ ಸರ್ಕಾರಿ ಸೇವೆಯಿಂದ ತೆಗೆದುಹಾಕಲ್ಪಟ್ಟ 39 ದಂತ ಆರೋಗ್ಯಾಧಿಕಾರಿಗಳನ್ನು ಇದರೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿ ತಿಳಿಸಿರುವಂತೆ ಅವರುಗಳು ಈ ಹಿಂದೆ ಕರ್ತವ್ಯ ನಿರ್ವಹಿಸುತ್ತಿದ್ದ ಸ್ಥಳಗಳಲ್ಲಿಯೇ ಗುತ್ತಿಗೆ ಆಧಾರದ ಮೇಲೆ ತಿಂಗಳಿಗೆ ರೂ. 7,400.00 ಗಳ ಸಂಭಾವನೆಯ ಆಧಾರದ ಮೇಲೆ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೆ ನೇಮಕ ಮಾಡಿಕೊಳ್ಳಲಾಗಿದೆ.

ಸರ್ಕಾರಿ ಆದೇಶಗಳ ಸಂಖ್ಯೆ: ಆಕುಕ 125 ಹೆಚ್‌ಎಸ್‌ಹೆಚ್ 92, ದಿನಾಂಕ: 15.10.92 ಹಾಗೂ ಆಕುಕ 317 ಹೆಚ್‌ಎಸ್‌ಹೆಚ್ 99, ದಿನಾಂಕ: 1.8.2001 ರಲ್ಲಿ ಗುತ್ತಿಗೆ ಆಧಾರದ ಮೇಲೆ ವೈದ್ಯಾಧಿಕಾರಿಗಳ ನೇಮಕಾತಿಗೆ ಸಂಬಂಧಿಸಿದಂತೆ ಹೊರಡಿಸಲಾಗಿರುವ ನಿಬಂಧನೆ ಮತ್ತು ಷರತ್ತುಗಳು ಹಾಗೂ ವೇತನ ವಿತರಣೆ : ಸೌಲಭ್ಯಗಳನ್ನು ಪ್ರಸ್ತುತ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳುವ ಅಭ್ಯರ್ಥಿಗಳಿಗೂ ಅನ್ವಯಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕಾಶೀನಾಥ ಪಟವಾಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಅನುಬಂಧ**

**ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 939 ಹೆಚ್‌ಎಸ್‌ಹೆಚ್ 2003, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್ 2003**

| ಕ್ರ.ಸಂ. | ಗುತ್ತಿಗೆ ದಂತ ಆರೋಗ್ಯಾಧಿಕಾರಿ ಹೆಸರು ಮತ್ತು ನೇಮಕಾತಿ ಮಾಡಿರುವ ಸ್ಥಳ |
|---|---|
| 1 | ಡಾ: ಸಮೀರ್ ಸಿ.ಎಂ.<br>ಸಾರ್ವಜನಿಕ ಆಸ್ಪತ್ರೆ, ವೀರಾಜಪೇಟೆ, ಮಡಿಕೇರಿ |
| 2 | ಡಾ: ಕೇಶವ ಉಪೇಂದ್ರ ಭಟ್<br>ಸಾರ್ವಜನಿಕ ಆಸ್ಪತ್ರೆ, ಸಿರ್ಸಿ, ಕಾರವಾರ, ಉ.ಕ. ಜಿಲ್ಲೆ. |
| 3 | ಡಾ: ಶ್ರೀಕಾಂತ್<br>ಸಾರ್ವಜನಿಕ ಆಸ್ಪತ್ರೆ, ಮಾಗಡಿ, ಬೆಂಗಳೂರು ಗ್ರಾ. ಜಿಲ್ಲೆ |
| 4 | ಡಾ: ನಾಗೇಂದ್ರಗುಪ್ತ ವಿ.ಆರ್.<br>ಸಾರ್ವಜನಿಕ ಆಸ್ಪತ್ರೆ, ಚಿಕ್ಕಬಳ್ಳಾಪುರ, ಕೋಲಾರ ಜಿಲ್ಲೆ |
| 5 | ಡಾ: ವೀರಾ ರೆಡ್ಡಿ<br>ವಿಮ್ಸ್, ಬಳ್ಳಾರಿ (ಜಿಲ್ಲಾ ಆಸ್ಪತ್ರೆ, ಬಳ್ಳಾರಿ) |

| ಕ್ರ.ಸಂ. | ಗುತ್ತಿಗೆ ದಂತ ಆರೋಗ್ಯಾಧಿಕಾರಿ ಹೆಸರು ಮತ್ತು ನೇಮಕಾತಿ ಮಾಡಿರುವ ಸ್ಥಳ |
|---|---|
| 6 | ಡಾ: ರವಿ ಎಂ.ಜಿ.<br>ಸಾರ್ವಜನಿಕ ಆಸ್ಪತ್ರೆ, ಅಂಕೋಲ, ಕಾರವಾರ |
| 7 | ಡಾ: ಜಯದೀಪ್ ಎನ್.ಎ.<br>ಸಾರ್ವಜನಿಕ ಆಸ್ಪತ್ರೆ, ಬಂಟ್ವಾಳ, ದಕ್ಷಿಣ ಕನ್ನಡ ಜಿಲ್ಲೆ |
| 8 | ಡಾ: ಜಿ.ಎಸ್. ವೇಣುಗೋಪಾಲ<br>ಸಾರ್ವಜನಿಕ ಆಸ್ಪತ್ರೆ, ಚಿಂತಾಮಣಿ, ಕೋಲಾರ ಜಿಲ್ಲೆ |
| 9 | ಡಾ: ನಾರಾಯಣ ರೆಡ್ಡಿ<br>ಸಾರ್ವಜನಿಕ ಆಸ್ಪತ್ರೆ, ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ |
| 10 | ಡಾ: ಹೇಮಲತ ಬಿ.ಆರ್.<br>ಸಾರ್ವಜನಿಕ ಆಸ್ಪತ್ರೆ, ಗುಬ್ಬಿ, ತುಮಕೂರು ಜಿಲ್ಲೆ |
| 11 | ಡಾ: ಮಂಜುನಾಥ ಬಿ.ಕೆ.<br>ಸಾರ್ವಜನಿಕ ಆಸ್ಪತ್ರೆ, ಸಿರಾ, ತುಮಕೂರು ಜಿಲ್ಲೆ |
| 12 | ಡಾ: ಸಮಿವುಲ್ಲಾ ಷರೀಫ್ ಎಸ್.ಎ.<br>ಸಾರ್ವಜನಿಕ ಆಸ್ಪತ್ರೆ, ಬನ್ನೂರು, ಮೈಸೂರು |
| 13 | ಡಾ: ಪುಷ್ಪಲತಾ ಸಿ.ವಿ.<br>ಸಾರ್ವಜನಿಕ ಆಸ್ಪತ್ರೆ, ಗುಡಿಬಂಡೆ, ಕೋಲಾರ |
| 14 | ಡಾ: ಶಾಂತಲಾ ಕೆ.ಎಸ್.<br>ಸಾರ್ವಜನಿಕ ಆಸ್ಪತ್ರೆ, ಕಾರ್ಕಳ, ಉಡುಪಿ ಜಿಲ್ಲೆ |
| 15 | ಡಾ: ನವೀನ್ ಸಿ.ಆರ್.<br>ಸಾರ್ವಜನಿಕ ಆಸ್ಪತ್ರೆ, ತುರುವೇಕೆರೆ, ತುಮಕೂರು |
| 16 | ಡಾ: ಲೀಲಾ ನಾಡಗೌಡ<br>ಸಾರ್ವಜನಿಕ ಆಸ್ಪತ್ರೆ, ಹುಕ್ಕೇರಿ, ಬೆಳಗಾಂ |
| 17 | ಡಾ: ಶಶಿಕಿರಣ ಜೆ.<br>ಸಾರ್ವಜನಿಕ ಆಸ್ಪತ್ರೆ, ಚನ್ನರಾಯಪಟ್ಟಣ, ಹಾಸನ |
| 18 | ಡಾ: ರಂಜನಿ ಕೆ.ವಿ.<br>ಸಾರ್ವಜನಿಕ ಆಸ್ಪತ್ರೆ, ತಲಕಾಡು, ಮೈಸೂರು |
| 19 | ಡಾ: ಮುಷಾಕಿರ್ ಹುಸೇನ್<br>ಸಾರ್ವಜನಿಕ ಆಸ್ಪತ್ರೆ, ಶೃಂಗೇರಿ, ಚಿಕ್ಕಮಗಳೂರು ಜಿಲ್ಲೆ |
| 20 | ಡಾ: ಬಸವನಗೌಡ ಸಿ. ಪಾಟೀಲ್<br>ಸರ್ಕಾರಿ ದಂತ ಮಹಾವಿದ್ಯಾಲಯ, ಬೆಂಗಳೂರು (ಸ್ನಾತಕೋತ್ತರ ವ್ಯಾಸಂಗ) |
| 21 | ಡಾ: ನಿರ್ಮಲಾ ರೆಡ್ಡಿ<br>ಸಾರ್ವಜನಿಕ ಆಸ್ಪತ್ರೆ, ಸಿಂಧನೂರು, ರಾಯಚೂರು |
| 22 | ಡಾ: ಸುನಿಲ್ ಪೂಜಾರಿ<br>ಸಾರ್ವಜನಿಕ ಆಸ್ಪತ್ರೆ, ಮುಧೋಳ್, ಬಾಗಲಕೋಟೆ ಜಿಲ್ಲೆ |
| 23 | ಡಾ: ಮಲ್ಲನ ಗೌಡ ಬಿ.ಪಿ.<br>ಸಾರ್ವಜನಿಕ ಆಸ್ಪತ್ರೆ, ರಾಣೇಬೆನ್ನೂರು, ಹಾವೇರಿ |
| 24 | ಡಾ: ದಾಕ್ಷಾಯಿಣಿ ಟಿ.ಡಿ.<br>ಸಾರ್ವಜನಿಕ ಆಸ್ಪತ್ರೆ, ಬ್ಯಾಡಗಿ, ಹಾವೇರಿ ಜಿಲ್ಲೆ |
| 25 | ಡಾ: ಮಂಜುಳಾ ಎಂ.<br>ಸಾರ್ವಜನಿಕ ಆಸ್ಪತ್ರೆ, ಯಳಂದೂರು, ಚಾಮರಾಜನಗರ ಜಿಲ್ಲೆ |
| 26 | ಡಾ: ಸುಮಾ ವೈ.<br>ಸಾರ್ವಜನಿಕ ಆಸ್ಪತ್ರೆ, ಹೊಸದುರ್ಗ, ಚಿತ್ರದುರ್ಗ ಜಿಲ್ಲೆ |
| 27 | ಡಾ: ಅನಿಲ್ ಧಾವನ್ ಇ.<br>ಸಾರ್ವಜನಿಕ ಆಸ್ಪತ್ರೆ, ಕುಶಾಲನಗರ, ಕೊಡಗು ಜಿಲ್ಲೆ |
| 28 | ಡಾ: ಶ್ರೀನಾಥ್ ಎಸ್.ಕೆ.<br>ಸರ್ಕಾರಿ ದಂತ ಮಹಾವಿದ್ಯಾಲಯ, ಬೆಂಗಳೂರು |

| ಕ್ರ.ಸಂ. | ಗುತ್ತಿಗೆ ದಂತ ಆರೋಗ್ಯಾಧಿಕಾರಿ ಹೆಸರು ಮತ್ತು ನೇಮಕಾತಿ ಮಾಡಿರುವ ಸ್ಥಳ |
|---|---|
| 29 | ಡಾ: ಮೋಹನ್ ಆರ್. ಸಕ್ರಿ<br>ಎಸ್‌ಡಿಎಂ ದಂತ ಕಾಲೇಜು, ಧಾರವಾಡ (ಸ್ನಾತಕೋತ್ತರ ವ್ಯಾಸಂಗ) |
| 30 | ಡಾ: ರೋಸಮ್ಮ ಜಾರ್ಜ್<br>ಸಾರ್ವಜನಿಕ ಆಸ್ಪತ್ರೆ, ಆಲೂರು, ಹಾಸನ ಜಿಲ್ಲೆ |
| 31 | ಡಾ: ಯೋಗೇಂದ್ರ ನಾಯ್ಕ ಜೆ.ಆರ್.<br>ಜಿಲ್ಲಾ ಆಸ್ಪತ್ರೆ, ಚಿಕ್ಕಮಗಳೂರು |
| 32 | ಡಾ: ಶೋಭಾ ಕೆ.ಎಂ.<br>ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ |
| 33 | ಡಾ: ರಶ್ಮಿ ಎಸ್.<br>ಸಾರ್ವಜನಿಕ ಆಸ್ಪತ್ರೆ, ಸುಳ್ಯ ಮಂಗಳೂರು |
| 34 | ಡಾ: ಜಗದೀಶ್ ಕೆ.<br>ಸಾರ್ವಜನಿಕ ಆಸ್ಪತ್ರೆ, ಚಿಕ್ಕನಾಯಕನಹಳ್ಳಿ, ತುಮಕೂರು |
| 35 | ಡಾ: ಗಿರೀಶ್ ಜೆ.ಕೆ.<br>ಸಾರ್ವಜನಿಕ ಆಸ್ಪತ್ರೆ, ಹೊಳೆನರಸೀಪುರ, ಹಾಸನ ಜಿಲ್ಲೆ |
| 36 | ಡಾ: ಲಕ್ಷ್ಮಣ ವಿ.ಎನ್.<br>ಸಾರ್ವಜನಿಕ ಆಸ್ಪತ್ರೆ, ಚನ್ನಪಟ್ಟಣ, ಬೆಂಗಳೂರು ಗ್ರಾ. ಜಿಲ್ಲೆ |
| 37 | ಡಾ: ಸಂಜಯ್ ಸೀತಾರಾಮ ನಾಯ್ಕ್<br>ಸಾರ್ವಜನಿಕ ಆಸ್ಪತ್ರೆ, ಹೊನ್ನಾವರ, ಕಾರವಾರ |
| 38 | ಡಾ: ಪ್ರವೀಣ್ ಬಿ.ವಿ.<br>ಸಾರ್ವಜನಿಕ ಆಸ್ಪತ್ರೆ, ತರೀಕೆರೆ, ಚಿಕ್ಕಮಗಳೂರು |
| 39 | ಡಾ: ವೆಂಕಟೇಶ್ ಎಸ್.<br>ಸಾರ್ವಜನಿಕ ಆಸ್ಪತ್ರೆ, ಜಗಳೂರು, ದಾವಣಗೆರೆ ಜಿಲ್ಲೆ |

**ಕಾಶೀನಾಥ ಪಟವಾಡಿ**

ಪಿ.ಆರ್. 1561

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಎ. ಆನಂದ್, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರನ್ನು ಅಮಾನತ್ತಿನಿಂದ ಹಿಂತೆಗೆದುಕೊಂಡು ಕೆಲಸದ ಮೇಲೆ ಪುನರ್‌ನೇಮಕ ಮಾಡಿಕೊಳ್ಳುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶಗಳ ಸಂಖ್ಯೆ: ವಾಕೈ 40 ಕೈಸೇವೆ 2002, ದಿನಾಂಕ: 9.1.2003 ಮತ್ತು 23.1.2003.

2) ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಅರ್ಜಿ ಸಂಖ್ಯೆ: 385/2003ರ ಮೇಲೆ ದಿನಾಂಕ: 26.6.2003 ರಂದು ನೀಡಿರುವ ತೀರ್ಪು

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶ ದಿನಾಂಕ: 9.1.2003 ರಲ್ಲಿ, ಸರ್ಕಾರವು, ಶ್ರೀ ಆನಂದ್, ಜಂಟಿ ನಿರ್ದೇಶಕರು ಇವರನ್ನು ಸರ್ಕಾರದ ವಸತಿಗೃಹವನ್ನು ಉಪಬಾಡಿಗೆ ನೀಡಿದ ಆರೋಪದ ಮೇಲೆ ಶಿಸ್ತುಕ್ರಮ ಬಾಕಿಯಿಟ್ಟು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ತೀರ್ಪಿನಲ್ಲಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ನೀಡಿದ ತೀರ್ಪಿನಲ್ಲಿ ಶ್ರೀ ಆನಂದ್, ಜಂಟಿ ನಿರ್ದೇಶಕರು ಇವರ ಅಮಾನತ್ತನ್ನು ರದ್ದುಪಡಿಸಿದೆ.

ಈ ಹಿನ್ನೆಲೆಯಲ್ಲಿ, ಸರ್ಕಾರವು ಸದರಿ ಅಧಿಕಾರಿಯ ವಿರುದ್ಧ ಶಿಸ್ತುಕ್ರಮಗಳನ್ನು ಬಾಕಿಯಿಟ್ಟು ಅಮಾನತ್ತಿನಿಂದ ಹಿಂತೆಗೆದುಕೊಂಡು ಕೆಲಸದ ಮೇಲೆ ಪುನರ್‌ನೇಮಕ ಮಾಡಿಕೊಳ್ಳಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 92 ಕೈಸೇವಿ 2002, ಬೆಂಗಳೂರು, ದಿನಾಂಕ: 1ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ, ಸರ್ಕಾರವು, ಕರ್ನಾಟಕ ಸರ್ಕಾರಿ ಸೇವಾ (ಸಿಸಿ ಮತ್ತು ಎ) ನಿಯಮಾವಳಿ-1957ರ ನಿಯಮ 10ರ ಉಪ ನಿಯಮ 5(ಸಿ) ಯಲ್ಲಿ ಪ್ರದತ್ತವಾಗಿರುವ ಅಧಿಕಾರಗಳನ್ನು ಚಲಾಯಿಸಿ, ಶ್ರೀ ಎ. ಆನಂದ್, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ವಿರುದ್ಧ ಶಿಸ್ತುಕ್ರಮ ಬಾಕಿಯಿಟ್ಟು ತಕ್ಷಣದಿಂದಲೇ ಜಾರಿಗೆ ಬರುವಂತೆ ಅಮಾನತ್ತಿನಿಂದ ಹಿಂತೆಗೆದುಕೊಂಡು ಸೇವೆಗೆ ಪುನರ್‌ನೇಮಕ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ. (ಕೈಗಾರಿಕಾ ಸೇವೆಗಳು)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ದಿನಾಂಕ: 24.10.1980 ಕ್ಕಿಂತ ಪೂರ್ವದ ಅರಣ್ಯ ಭೂಮಿಯಲ್ಲಿನ ಅತಿಕ್ರಮಣಗಳನ್ನು ಸಕ್ರಮಗೊಳಿಸುವ ಬಗ್ಗೆ ಪರಿಶೀಲಿಸಲು ರಚಿಸಿರುವ ತಾಲ್ಲೂಕು ಮಟ್ಟದ ಸಮಿತಿಗಳಿಗೆ ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಅಪಜೀ 361 ಎಫ್‌ಜಿಎಲ್ 2002 (ಭಾಗ), ದಿನಾಂಕ: 1.12.2003.

2) ಮುಖ್ಯಮಂತ್ರಿಯವರ ಸಚಿವಾಲಯದ ಟಿಪ್ಪಣಿ ಸಂಖ್ಯೆ: ಮುಮ:ಅಕಾ:5523/03, ದಿನಾಂಕ: 25.11.2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ದಿನಾಂಕ: 24.10.1980 ರ ಪೂರ್ವದ ಅರಣ್ಯ ಭೂಮಿಯ ಅತಿಕ್ರಮಣಗಳನ್ನು ಸಕ್ರಮಗೊಳಿಸುವ ಬಗ್ಗೆ ಪರಿಶೀಲಿಸಲು ಪ್ರತಿ ತಾಲ್ಲೂಕಿಗೆ ಒಂದರಂತೆ ತಾಲ್ಲೂಕು ಮಟ್ಟದ ಸಮಿತಿಗಳನ್ನು ರಚಿಸಲಾಗಿದೆ. ಈ ತಾಲ್ಲೂಕು ಮಟ್ಟದ ಸಮಿತಿಗಳಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ವೀರಾಜಪೇಟೆ ಮತ್ತು ಮೂಡಿಗೆರೆ ತಾಲ್ಲೂಕು ಮಟ್ಟದ ಸಮಿತಿಗೆ ಹೆಸರುಗಳನ್ನು ಮೇಲೆ ಓದಲಾದ ಉಲ್ಲೇಖ (2)ರ ಟಿಪ್ಪಣಿಯಲ್ಲಿ ಸೂಚಿಸಲಾಗಿದೆ.

ಅದರಂತೆ ಅಧಿಕಾರೇತರ ಸದಸ್ಯರ ನಾಮ ನಿರ್ದೇಶನವನ್ನು ಮಾಡಲು ಉದ್ದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 323 ಎಫ್‌ಜಿಎಲ್ 2003, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್ 2003**

ದಿನಾಂಕ: 1.12.2003 ರಲ್ಲಿ ರಚಿಸಲಾದ ತಾಲ್ಲೂಕು ಮಟ್ಟದ ಸಮಿತಿಗಳಲ್ಲಿ ವೀರಾಜಪೇಟೆ ತಾಲ್ಲೂಕು ಮತ್ತು ಮೂಡಿಗೆರೆ ತಾಲ್ಲೂಕುಗಳಿಗೆ ಸಂಬಂಧಿಸಿದಂತೆ ಕೆಳಕಂಡ ಅಧಿಕಾರೇತರ ಅಧ್ಯಕ್ಷರು ಮತ್ತು ಅಧಿಕಾರೇತರ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮ ನಿರ್ದೇಶನ ಮಾಡಿದೆ.

**ವೀರಾಜಪೇಟೆ ತಾಲ್ಲೂಕು**

| | | |
|---|---|---|
| 1 | ಪಿ.ಪಿ. ದೇವಯ್ಯ<br>ನಲ್ಲೂರು ಗ್ರಾಮ ಮತ್ತು ಅಂಚೆ, ವೀರಾಜಪೇಟೆ ತಾಲ್ಲೂಕು, ಕೊಡಗು ಜಿಲ್ಲೆ | ಅಧ್ಯಕ್ಷರು |
| 2 | ಉಮೇಶ್ ಕೇಚಮಯ್ಯ<br>ಬಿ. ಶೆಟ್ಟಿಗೇರಿ, ವೀರಾಜಪೇಟೆ ತಾಲ್ಲೂಕು | ಸದಸ್ಯರು |
| 3 | ಹೆ.ಕೆ. ಚೆಲುವ<br>ಕೃಷ್ಣ ಕಾಲೋನಿ, ಪೊನ್ನಂಪೇಟೆ | ಸದಸ್ಯರು |
| 4 | ಶ್ರೀಮತಿ ರಾಣಿಮಂದಣ್ಣ<br>ಗಾಂಧಿನಗರ, ವೀರಾಜಪೇಟೆ ಅಂಚೆ, ವೀರಾಜಪೇಟೆ ತಾಲ್ಲೂಕು | ಸದಸ್ಯರು |

**ಮೂಡಿಗೆರೆ ತಾಲ್ಲೂಕು**

| | | |
|---|---|---|
| 1 | ಕೆ.ಕೆ. ರಾಮಯ್ಯ<br>ಕಿರುಗುಂದ ಗ್ರಾಮ, ಗೋಣಿಬೀಡು ಹೋಬಳಿ, ಮೂಡಿಗೆರೆ ತಾಲ್ಲೂಕು | ಅಧ್ಯಕ್ಷರು |
| 2 | ದಶರಥ್<br>ಬಿಳಗುಳ, ಮೂಡಿಗೆರೆ ತಾಲ್ಲೂಕು | ಸದಸ್ಯರು |
| 3 | ಪಿ. ಆನಂದ್ ಬಿನ್ ಮೊಡಿಯಂಮೇಸ್ತ್ರಿ<br>ಪ್ರೆಡಿಯ ಕಾಲೋನಿ, ಜಿ. ಹೊಸಹಳ್ಳಿ ಅಂಚೆ, ಮೂಡಿಗೆರೆ ತಾಲ್ಲೂಕು | ಸದಸ್ಯರು |
| 4 | ಶ್ರೀಮತಿ ಕುಸುಮ ಸುಬ್ರಮಣ್ಯ<br>ತೋಟದೂರು, ಕಳಸ ಹೋಬಳಿ, ಮೂಡಿಗೆರೆ ತಾಲ್ಲೂಕು | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1562

**ಎಸ್.ಆರ್. ವತ್ಸಲ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ವಿಶೇಷ ಭೂಸ್ವಾಧೀನಾಧಿಕಾರಿಗಳು, ಬೆಂಗಳೂರು ಕಛೇರಿಯ ಶ್ರೀ ಸಿ. ಗೂಪಾಳಪ್ಪ, ವ್ಯವಸ್ಥಾಪಕರು, ಶ್ರೀ ಬಿ.ಎಲ್. ರಮೇಶ್ ವಿಷಯ ನಿರ್ವಾಹಕರು ಹಾಗೂ ಶ್ರೀ ನಟರಾಜ್ ಮೂರ್ತಿ, ಭೂಮಾಪಕರು ಇವರುಗಳನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ:** ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ಇವರ ಪತ್ರ ಸಂಖ್ಯೆ: ಎಲ್.ಎ.ಕ್ಯೂ.ಸಿ.ಆರ್. 69: 2001-02, ದಿನಾಂಕ: 18.7.2002.

**ಪ್ರಸ್ತಾವನೆ:**

ಆನೇಕಲ್ ತಾಲ್ಲೂಕು ಸರ್ಜಾಪುರ ಹೋಬಳಿ, ಕೂಡ್ಲು ಗ್ರಾಮದ ಸ.ನಂ. 42:1 ರಲ್ಲಿ 1 ಎಕರೆ 24 ಗುಂಟೆ ಏರ್ ಕ್ರಾಫ್ಟ್ ಗೃಹ ನಿರ್ಮಾಣ ಸಹಕಾರ ಸಂಘಕ್ಕೆ ಭೂಸ್ವಾಧೀನವಾಗಿದ್ದು, ಭೂ ಮಾಲೀಕರಾದ ಶ್ರೀ ನಾರಾಯಣ ರೆಡ್ಡಿ ಇವರಿಗೆ ಭೂ ಪರಿಹಾರದ ಮೊಬಲಗು ರೂ. 1,20,937.00 ವೋಚರ್ ಸಂಖ್ಯೆ: 354:93-94 ದಿನಾಂಕ: 15.3.94 ರಂದು ನೀಡಲಾಗಿದ್ದು, ಇದೇ ಪ್ರಕರಣಕ್ಕೆ ಮತ್ತೆ ದಿನಾಂಕ: 19.9.2001 ರಂದು ವೋಚರ್ ಸಂ. 130:2001-02 ಶ್ರೀ ನಾರಾಯಣ ರೆಡ್ಡಿ ರವರಿಗೆ 1,20,938.00 ರೂ.ಗಳನ್ನು ಹೀಗೆ ಎರಡು ಬಾರಿ ಹಣ ಪಾವತಿ ಮಾಡಲಾಗಿರುತ್ತದೆ. ಈ ಪ್ರಕರಣದಲ್ಲಿ ಎರಡನೇ ಸಲ ಹಣ ಪಾವತಿ ಮಾಡುವ ಅವಧಿಯಲ್ಲಿ ಸದರಿ ಕಛೇರಿಯಲ್ಲಿ ಈ ಕೆಳಕಂಡ ಅಧಿಕಾರಿಗಳು : ನೌಕರರು ಕಾರ್ಯ ನಿರ್ವಹಿಸುತ್ತಿದ್ದರು.

1) ಶ್ರೀ ಮುನಿಶಾಮಯ್ಯ, ವಿಶೇಷ ಭೂಸ್ವಾಧಿನಾಧಿಕಾರಿಗಳು
2) ಶ್ರೀ ಗೂಪಾಳಪ್ಪ, ವ್ಯವಸ್ಥಾಪಕರು
3) ಶ್ರೀ ಬಿ.ಎಲ್. ರಮೇಶ್, ವಿಷಯ ನಿರ್ವಾಹಕರು
4) ಶ್ರೀ ನಟರಾಜಮೂರ್ತಿ, ಭೂಮಾಪಕರು

ವಿಶೇಷ ಭೂಸ್ವಾಧೀನಾಧಿಕಾರಿ, ಬೆಂಗಳೂರು ಇವರ ವರದಿಯಲ್ಲಿ ಕೂಡ್ಲು ಗ್ರಾಮದ ಶ್ರೀ ನಾರಾಯಣರೆಡ್ಡಿ ರವರಿಗೆ ಒಂದೇ ಪ್ರಕರಣಕ್ಕೆ ಸಂಬಂಧಿಸಿದಂತೆ, ಎರಡು ಬಾರಿ ಭೂ ಪರಿಹಾರ ನೀಡಿರುವುದು ವಾಸ್ತವಾಂಶವಿರುವುದಾಗಿಯೂ, ಸಂಬಂಧಿಸಿದ ಕಡತವನ್ನು ಪರಿಶೀಲಿಸಿದ್ದು, ವೋಚರ್ ಸಂ. 354ಕ್ಕೆ ದಾಖಲೆಗಳು ಇರುತ್ತದೆಂದು ವರದಿಯಲ್ಲಿ ತಿಳಿಸಿರುತ್ತಾರೆ. ಆದರೆ, 130:2001-02ರ ವೋಚರಿಗೆ ಸಂಬಂಧಿಸಿದ ಸದರಿ ಕಡತದಲ್ಲಿ ಯಾವುದೇ ದಾಖಲಾತಿಗಳು ಇರುವುದಿಲ್ಲವೆಂದು, ಸದರಿ ಕಡತಕ್ಕೆ ಪುಟ ಸಂಖ್ಯೆ ಮತ್ತು ಕಛೇರಿ ಟಿಪ್ಪಣಿಯ ಪುಟ ಸಂಖ್ಯೆ ನಮೂದಿಸಿರುವುದಿಲ್ಲ, ಅಲ್ಲದೆ ಕಂಡಿಕೆ 179 ಮತ್ತು 181, 182, 183 ಇರುವುದಾಗಿ, 179 ರಲ್ಲಿ ಮುಂದುವರಿದಂತೆ ಬರೆದ ನೋಟ್‌ಶೀಟ್ ಇರುವುದಿಲ್ಲವೆಂದು ವರದಿಯಲ್ಲಿ ತಿಳಿಸಿರುತ್ತಾರೆ. ಹಾಗೂ ಹಣ ಪಡೆಯುವಲ್ಲಿ ನೀಡಬಹುದಾದ ಯಾವುದೇ ದಾಖಲಾತಿಗಳು ಇರುವುದಿಲ್ಲವೆಂದೂ, ಈ ಬಗ್ಗೆ ಬೆಂಗಳೂರು ವಿಭಾಗಾಧಿಕಾರಿಗಳು, ಭೂಸ್ವಾಧೀನ ಕಛೇರಿಯನ್ನು ದಿನಾಂಕ: 5.3.2002 ರಂದು ತಪಾಸಣೆಯನ್ನು ನಡೆಸಿದ ವೇಳೆಯಲ್ಲಿ ಇವುಗಳನ್ನು ಗುರುತಿಸಿರುವುದಾಗಿ ತಿಳಿಸಿರುವರು. ಈ ವಿಚಾರದಲ್ಲಿ ಸದರಿ ಕಾರ್ಯಾಲಯದ ಶ್ರೀ ಮುನಿಶಾಮಯ್ಯ, ವಿಶೇಷ ಭೂಸ್ವಾಧೀನಾಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರಾದ ಶ್ರೀ ಗೂಪಾಳಪ್ಪ, ವ್ಯವಸ್ಥಾಪಕರು, ಶ್ರೀ ನಟರಾಜ್ ಮೂರ್ತಿ, ಭೂ ಮಾಪಕರು, ಶ್ರೀ ಬಿ.ಎಲ್. ರಮೇಶ್, ವಿಷಯ ನಿರ್ವಾಹಕರು ಇವರುಗಳು ಎರಡನೇ ಬಾರಿ ಹಣ ಪಾವತಿಸುವ ವೇಳೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದು, ಸರ್ಕಾರದ ಹಣವನ್ನು ಎರಡನೇ ಬಾರಿಗೆ ಪಾವತಿಸುವಲ್ಲಿ ನೇರವಾಗಿ ಈ ಪ್ರಕರಣದಲ್ಲಿ ಭಾಗಿಯಾಗಿದ್ದಾರೆಂದು, ಅಲ್ಲದೆ ಈ ನೌಕರರ ವಿರುದ್ಧ ಸಾರ್ವಜನಿಕರಿಂದ ಸಾಕಷ್ಟು ಆಪಾದನೆಗಳು ಇರುವುದಾಗಿ ಓದಲಾದ (1)ರ ಪತ್ರದಲ್ಲಿ ವಿಶೇಷ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ವರದಿ ಮಾಡಿರುತ್ತಾರೆ.

ಈ ಹಿನ್ನೆಲೆಯಲ್ಲಿ ಸದರಿ ವರದಿಯನ್ನು ಸರ್ಕಾರವು ಪರಿಶೀಲಿಸಿ ಮೇಲ್ಕಂಡ ಆಪಾದಿತ ನೌಕರರು ಅಧಿಕಾರ ದುರುಪಯೋಗ, ಕರ್ತವ್ಯಚ್ಯುತಿ, ನಿರ್ಲಕ್ಷತನ ಹಾಗೂ ಸರ್ಕಾರಕ್ಕೆ ಆರ್ಥಿಕ ನಷ್ಟವನ್ನುಂಟು ಮಾಡಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ, ಸದರಿಯವರ ವಿರುದ್ಧ ಇಲಾಖಾ ವಿಚಾರಣೆಯನ್ನು ಹೂಡುವುದನ್ನು ಕಾಯ್ದಿರಿಸಿ, ಸೇವೆಯಿಂದ ಅಮಾನತ್ತುಗೊಳಿಸಲು ನಿರ್ಧರಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 342 ಬಿಎಂಎಂ 2002(ಭಾಗ), ಬೆಂಗಳೂರು, ದಿನಾಂಕ: 1ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ವಿವರವಾಗಿ ಪರಿಶೀಲಿಸಿ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(1)(ಡಿ) ಮತ್ತು ಇದೇ ನಿಯಮದ ಉಪ ನಿಯಮ (3) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು (1) ಶ್ರೀ ಗೂಪಾಳಪ್ಪ, ವ್ಯವಸ್ಥಾಪಕರು, (2) ಶ್ರೀ ನಟರಾಜ್ ಮೂರ್ತಿ, ಭೂ ಮಾಪಕರು ಮತ್ತು (3) ಶ್ರೀ ಬಿ.ಎಲ್. ರಮೇಶ್, ವಿಷಯ ನಿರ್ವಾಹಕರು, ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿ, ಬೆಂಗಳೂರು ಇವರುಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ಹೂಡುವುದನ್ನು ಕಾಯ್ದಿರಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿದೆ.

ಅಮಾನತ್ತುಗೊಂಡ ನೌಕರರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ, ನಿಯಮ 98 ರನ್ವಯ ಜೀವನಾಂಶ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಸಕ್ಷಮ ಪ್ರಾಧಿಕಾರಿಯ ಅನುಮತಿ ಪಡೆಯದೆ ಕೇಂದ್ರ ಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2

**ಡಿ.ಬಿ. ಗಣಾಚಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಸೇವೆಗಳು)

## ENERGY SECRETARIAT

**Sub:** Transfer of 1.2 M.W. Wind Power Capacity in favour of M/s Associated Autotex Ancillaries Private Limited - orders relating to.

**Read :** 1) Government Order No. DE 98 NCE 2000, dated: 10.7.2000.
2) Letter No. KRED/08/AAAPL/2003/1982, dated: 26.12.2003 received from the Managing Director, Karnataka Renewable Energy Development Limited, Bangalore.

**Preamble:**

In the Government Order dated: 10.7.2000 read at (1) above, sanction has been accorded for implementation of 110 M.W. capacity Wind Power Project at Chitradurga District to M/s Enercon India Limited.

(2) Now, the Managing Director, Karnataka Renewable Energy Development Limited, Bangalore, in his letter dated: 26.12.2003 read at (2) above, has recommended to the Government for transfer of 1.2 M.W. Wind Power capacity in favour of M/s. Associated Autotex Ancillaries Private Limited, Coimbatore, at survey No. 53 of Elladakere Village of Jogimatti wind Zone, Chitradurga district, from out of the sanctioned 110 M.W. capacity of M/s Enercon India Limited.

(3) The proposal has been examined and pass the following order:

**Government Order No: DE 313 NCE 2003, Bangalore, Dated 1st January 2004**

(4) Government are pleased to accord sanction for transfer of 1.2 M.W. Wind Power capacity in favour of M/s. Associated Autotex Ancillaries Private Limited, Coimbatore, at survey No. 53 of Elladakere Village of Jogimatti wind Zone, Chitradurga district, from out of 110 M.W. capacity of M/s. Enercon India Limited, allotted in the Government order dated: 10.7.2000.

(5) The terms and conditions of the original allotment made in the Government order read at (1) above to M/s Enercon India Limited, shall **IPSOFACTO** applicable to M/s Associated Autotex Ancillaries Private Limited, Coimbatore.

By Order and in the Name of the Governor of Karnataka,
PR-3
**K.L. Jayaram**
Under Secretary to Government,
Energy Department.

**Sub:** Transfer of 0.6 M.W. Wind Power Capacity in favour of M/s Goodluck Syndicate - orders relating to.

**Read :** 1) Government Order No. DE 98 NCE 2000, dated: 10.7.2000.
2) Letter No. KRED/08/GLS/2003/1983, dated: 26.12.2003 received from the Managing Director, Karnataka Renewable Energy Development Limited, Bangalore.

**Preamble:**

In the Government Order dated: 10.7.2000 read at (1) above, sanction has been accorded for implementation of 110 M.W. capacity Wind Power Project at Chitradurga District to M/s Enercon India Limited.

(2) Now, the Managing Director, Karnataka Renewable Energy Development Limited, Bangalore, in his letter dated: 26.12.2003 read at (2) above, has recommended to the Government for transfer of 0.6 M.W. Wind Power capacity in favour of M/s. Goodluck Syndicate, Coimbatore, at survey No. 53 of Elladakere Village of Jogimatti wind Zone, Chitradurga district, from out of the sanctioned 110 M.W. capacity of M/s Enercon India Limited.

(3) The proposal has been examined and pass the following order:

**Government Order No: DE 314 NCE 2003, Bangalore, Dated 1st January 2004**

(4) Government are pleased to accord sanction for transfer of 0.6 M.W. Wind Power capacity in favour of M/s. Goodluck Syndicate, Coimbatore, at survey No. 53 of Elladakere Village of Jogimatti wind Zone, Chitradurga district, from out of 110 M.W. capacity of M/s. Enercon India Limited, allotted in the Government order dated: 10.7.2000.

(5) The terms and conditions of the original allotment made in the Government order read at (1) above to M/s Enercon India Limited, shall **IPSOFACTO** applicable to M/s Goodluck Syndicate, Coimbatore.

By Order and in the Name of the Governor of Karnataka,
PR-4
**K.L. Jayaram**
Under Secretary to Government,
Energy Department.

**Sub:** Transfer of 6.6 M.W. Wind Power Capacity in favour of M/s Shraddha Constructions - orders relating to.

**Read :** 1) Government Order No. DE 98 NCE 2000, dated: 10.7.2000.
2) Letter No. KRED/08/SC/2003/1955, dated: 20.12.2003 received from the Managing Director, Karnataka Renewable Energy Development Limited, Bangalore.

**Preamble:**

In the Government Order dated: 10.7.2000 read at (1) above, sanction has been accorded for implementation of 110 M.W. capacity Wind Power Project at Chitradurga District to M/s Enercon India Limited.

(2) Now, the Managing Director, Karnataka Renewable Energy Development Limited, Bangalore, in his letter dated: 20.12.2003 read at (2) above, has recommended to the Government for transfer of 6.6 M.W. Wind Power capacity in favour of M/s. Shraddha Constructions, Pune, at survey No. 47 & 7 of Ittegehalli & Haladyamenahalli Village of Jogimatti wind Zone, Chitradurga district, from out of the sanctioned 110 M.W. capacity of M/s Enercon India Limited.

(3) The proposal has been examined and pass the following order:

**Government Order No: DE 308 NCE 2003, Bangalore, Dated 1st January 2004**

(4) Government are pleased to accord sanction for transfer of 6.6 M.W. Wind Power capacity in favour of M/s. Shraddha Constructions, Pune, at survey No. 47 & 7 of Ittegehalli & Haladyamenahalli Village of Jogimatti wind Zone, Chitradurga district, from out of 110 M.W. capacity of M/s. Enercon India Limited, allotted in the Government order dated: 10.7.2000.

(5) The terms and conditions of the original allotment made in the Government order read at (1) above to M/s Enercon India Limited, shall **IPSOFACTO** applicable to M/s Shraddha Constructions, Pune.

By Order and in the Name of the Governor of Karnataka,

PR-5

**K.L. Jayaram**

Under Secretary to Government,

Energy Department.

**Sub:** Transfer of 2.4 M.W. Wind Power Capacity in favour of M/s Shraddha Constructions - orders relating to.

**Read :** 1) Government Order No. DE 98 NCE 2000, dated: 10.7.2000.

2) Letter No. KRED/08/SC/2003/1954, dated: 20.12.2003 received from the Managing Director, Karnataka Renewable Energy Development Limited, Bangalore.

**Preamble:**

In the Government Order dated: 10.7.2000 read at (1) above, sanction has been accorded for implementation of 110 M.W. capacity Wind Power Project at Chitradurga District to M/s Enercon India Limited.

(2) Now, the Managing Director, Karnataka Renewable Energy Development Limited, Bangalore, in his letter dated: 20.12.2003 read at (2) above, has recommended to the Government for transfer of 2.4 M.W. Wind Power capacity in favour of M/s. Shraddha Constructions, Pune, at survey No. 47 of Ittegehalli Village of Jogimatti wind Zone, Chitradurga district, from out of the sanctioned 110 M.W. capacity of M/s Enercon India Limited.

(3) The proposal has been examined and pass the following order:

**Government Order No: DE 307 NCE 2003, Bangalore, Dated 1st January 2004**

(4) Government are pleased to accord sanction for transfer of 2.4 M.W. Wind Power capacity in favour of M/s. Shraddha Constructions, Pune, at survey No. 47 of Ittegehalli Village of Jogimatti wind Zone, Chitradurga district, from out of 110 M.W. capacity of M/s. Enercon India Limited, allotted in the Government order dated: 10.7.2000.

(5) The terms and conditions of the original allotment made in the Government order read at (1) above to M/s Enercon India Limited, shall **IPSOFACTO** applicable to M/s Shraddha Constructions, Pune.

By Order and in the Name of the Governor of Karnataka,

PR-6

**K.L. Jayaram**

Under Secretary to Government,

Energy Department.

**ಶಿಕ್ಷಣ ಸಚಿವಾಲಯ**

**ವಿಷಯ:** ತಾಂತ್ರಿಕ ಶಿಕ್ಷಣ ಇಲಾಖೆಯಲ್ಲಿನ ಸರ್ಕಾರಿ ಪಾಲಿಟೆಕ್ನಿಕ್‌ಗಳಲ್ಲಿನ ಗ್ರಂಥಾಲಯ ವಿಜ್ಞಾನ ಉಪನ್ಯಾಸಕರುಗಳಿಗೆ ದಿನಾಂಕ: 1.4.1993 ರಿಂದ ಪೂರ್ವಾನ್ವಯವಾಗುವಂತೆ ಎ.ಐ.ಸಿ.ಟಿ.ಇ ವೇತನ ಶ್ರೇಣಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ ಇಡಿ 479 ಟಿಪಿಇ 97, ದಿನಾಂಕ: 19.4.2001.

2) ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ: ಡಿಟಿಇ 35 ಇಎಸ್‌ಟಿ(1) ಬಿ 2001-02 ದಿನಾಂಕ: 4.3.2003.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 19.4.2001ರ ಆದೇಶದಲ್ಲಿ ಪ್ರಿಂಟಿಂಗ್ ಟೆಕ್ನಾಲಜಿ ಹಾಗೂ ಸರ್ಕಾರಿ ಪಾಲಿಟೆಕ್ನಿಕ್‌ಗಳಲ್ಲಿನ ಲೈಬ್ರರಿ ಸೈನ್ಸ್ ವಿಭಾಗಗಳ ಉಪನ್ಯಾಸಕರುಗಳಿಗೆ ದಿನಾಂಕ: 1.2.2001 ರಿಂದ ಜಾರಿಗೆ ಬರುವಂತೆ ಎ.ಐ.ಸಿ.ಟಿ.ಇ ವೇತನ ಶ್ರೇಣಿಯನ್ನು ಆ ಆದೇಶದಲ್ಲಿನ ಕೆಲವು ಷರತ್ತುಗಳಿಗೊಳಪಡಿಸಿ ವಿಸ್ತರಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ತಾಂತ್ರಿಕ ಶಿಕ್ಷಣ ನಿರ್ದೇಶಕರ ದಿನಾಂಕ: 4.3.2003 ರ ಪತ್ರದಲ್ಲಿ ಬೆಂಗಳೂರಿನ ಸ್ಪೈರಿಕ್ ನಲ್ಲಿ ಮುಖ್ಯ ಗ್ರಂಥಪಾಲರಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀಮತಿ ಸೌಭಾಗ್ಯ ರವರು ಮನವಿ ಸಲ್ಲಿಸಿ ತಾಂತ್ರಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿನ ಪಾಲಿಟೆಕ್ನಿಕ್‌ನ ಉಪನ್ಯಾಸಕರುಗಳಿಗೆ ದಿನಾಂಕ: 1.4.93 ರಿಂದ ಅನ್ವಯವಾಗುವಂತೆ ಸರ್ಕಾರಿ ಆದೇಶ ಸಂಖ್ಯೆ ಇಡಿ 79 ಡಿಟಿಇ 91 ದಿನಾಂಕ: 18.7.94 ರಲ್ಲಿ ಎ.ಐ.ಸಿ.ಟಿ.ಇ. ವೇತನ ಶ್ರೇಣಿಯನ್ನು ವಿಸ್ತರಿಸಲಾಗಿದೆ. ಸರ್ಕಾರಿ ಆದೇಶ ಸಂಖ್ಯೆ: ಇಡಿ 479 ಟಿಪಿಇ 97 ದಿನಾಂಕ: 19.4.2001 ರಲ್ಲಿ ಪ್ರಿಂಟಿಂಗ್ ಟೆಕ್ನಾಲಜಿ ಹಾಗೂ ಲೈಬ್ರರಿ ಸೈನ್ಸ್ ವಿಭಾಗಗಳ ಉಪನ್ಯಾಸಕರುಗಳಿಗೆ ದಿನಾಂಕ: 1.2.2001 ರಿಂದ ಅನ್ವಯವಾಗುವಂತೆ ಎ.ಐ.ಸಿ.ಟಿ.ಇ. ವೇತನ ಶ್ರೇಣಿಯನ್ನು ವಿಸ್ತರಿಸಲಾಗಿದೆ. ಈ ಹಿನ್ನೆಲೆಯಲ್ಲಿ ಎಲ್ಲಾ ಗ್ರಂಥಾಲಯ ಉಪನ್ಯಾಸಕರುಗಳಿಗೆ ದಿನಾಂಕ: 1.2.2001 ರಿಂದ ಎ.ಐ.ಸಿ.ಟಿ.ಇ. ವೇತನ ಶ್ರೇಣಿಯನ್ನು ವಿಸ್ತರಿಸಲಾಗಿದೆ. ಇದರಲ್ಲಿ ಕೆಲವರು 25 ವರ್ಷಗಳ ಸುದೀರ್ಘ ಸೇವೆಯನ್ನು ಸಲ್ಲಿಸುತ್ತಿದ್ದು, ಅವರುಗಳಿಗೆ ರಾಜ್ಯ ವೇತನದಲ್ಲಿನ ಮೂಲ ವೇತನಕ್ಕಿಂತ ಕಡಿಮೆ ವೇತನ ನಿಗದಿಯಾಗಿರುತ್ತದೆ. ಇದರಿಂದ ಜೇಷ್ಠತೆಯಲ್ಲಿ ಹಿರಿಯರಾದವರು ಜೇಷ್ಠತೆಯಲ್ಲಿ ಕಿರಿಯವರಿಗಿಂತ ಕಡಿಮೆ ವೇತನ ಉಂಟಾಗಿ ಆರ್ಥಿಕ ನಷ್ಟ ಉಂಟಾಗಿದೆ. ಸರ್ಕಾರದ ಆದೇಶ ಸಂಖ್ಯೆ ಇಡಿ 25 ಡಿಟಿಇ 2002 ದಿನಾಂಕ: 29.11.2002 ರಲ್ಲಿ ಡಿಪ್ಲೋಮಾ ಪದವೀಧರ ಉಪನ್ಯಾಸಕರಿಗೆ ದಿನಾಂಕ: 1.4.1993 ರಿಂದ ಪೂರ್ವಾನ್ವಯವಾಗುವಂತೆ ಎ.ಐ.ಸಿ.ಟಿ.ಇ ವೇತನ ಶ್ರೇಣಿಯನ್ನು ವಿಸ್ತರಿಸಲಾಗಿದೆ. ಇದರಿಂದ ಗ್ರಂಥಾಲಯ ವಿಜ್ಞಾನ ಉಪನ್ಯಾಸಕರಿಗೆ ಅಸಮಾನತೆಯನ್ನು ಉಂಟು ಮಾಡಿದಂತಾಗುತ್ತದೆ ಹಾಗೂ ಈ ಅಸಮಾನತೆಯಿಂದ ಪ್ರಿನ್ಸಿಪಾಲರ ಹುದ್ದೆಗೆ ಮುಂಬಡ್ತಿಗೆ ಅಡ್ಡಿಯಾದಂತಾಗಿರುತ್ತದೆ ಹಾಗೂ ಈಗಾಗಲೇ ಗ್ರಂಥಾಲಯ ವಿಜ್ಞಾನ ಉಪನ್ಯಾಸಕರುಗಳಿಗೆ ಮೊದಲು ಎ.ಐ.ಸಿ.ಟಿ.ಇ. ವೇತನ ಶ್ರೇಣಿ ಮಂಜೂರಾಗಿರುವುದರಿಂದ ಸರ್ಕಾರಕ್ಕೆ ಹೆಚ್ಚಿನ ಆರ್ಥಿಕ ಹೊರೆ ಬೀಳುವುದಿಲ್ಲ. ಆದುದರಿಂದ ಈ ಅನ್ಯಾಯ ಹಾಗೂ ಅಸಮಾನತೆಯನ್ನು ನಿವಾರಿಸಿ ಗ್ರಂಥಾಲಯ ವಿಭಾಗದ ಉಪನ್ಯಾಸಕರುಗಳಿಗೆ ದಿನಾಂಕ: 1.4.1993 ರಿಂದ ಪೂರ್ವಾನ್ವಯವಾಗುವಂತೆ ಎ.ಐ.ಸಿ.ಟಿ.ಇ ವೇತನ ಶ್ರೇಣಿಯನ್ನು ಮಂಜೂರು ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ ಎಂದು ತಿಳಿಸುತ್ತಾ ಈ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳಲು ಸರ್ಕಾರವನ್ನು ಕೋರಿರುತ್ತಾರೆ.

ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 123 ಟಿಪಿಇ 2003, ಬೆಂಗಳೂರು, ದಿನಾಂಕ: 5ನೇ ಜನವರಿ 2004**

ನಿರ್ದೇಶಕರು ತಾಂತ್ರಿಕ ಶಿಕ್ಷಣ ಅವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ಸರ್ಕಾರದ ಆದೇಶ ಸಂಖ್ಯೆ: ಇಡಿ 479 ಟಿಪಿಇ 97 ದಿನಾಂಕ: 19.4.2001 ರ ಆದೇಶವನ್ನು ಭಾಗಶಃ ಮಾರ್ಪಡಿಸಿ ಸರ್ಕಾರಿ ಪಾಲಿಟೆಕ್ನಿಕ್‌ಗಳ ಗ್ರಂಥಾಲಯ ವಿಜ್ಞಾನ ಉಪನ್ಯಾಸಕರಿಗೆ 1986ರ ಪರಿಷ್ಕೃತ ಎ.ಐ.ಸಿ.ಟಿ.ಇ ವೇತನ ಶ್ರೇಣಿಯನ್ನು ದಿನಾಂಕ: 1.2.2001 ರ ಬದಲಾಗಿ ದಿನಾಂಕ: 1.4.1993 ರಿಂದ ವಿಸ್ತರಿಸಲು ಹಾಗೂ ವೇತನವನ್ನು ಕಾಲ್ಪನಿಕವಾಗಿ (ನೋಷನಲ್) ದಿನಾಂಕ 1.4.1993 ರಿಂದ ನಿಗದಿಪಡಿಸಿ ಹಣಕಾಸಿನ ಸೌಲಭ್ಯಗಳನ್ನು ದಿನಾಂಕ: 1.2.2001 ರಿಂದ ನೀಡಲು ಮಂಜೂರಾತಿ ನೀಡಲಾಗಿದೆ. ಸರ್ಕಾರಿ ಆದೇಶ ಸಂಖ್ಯೆ ಇಡಿ 479 ಟಿಪಿಇ 97 ದಿನಾಂಕ 19.4.2001 ರಲ್ಲಿ ಸೂಚಿಸಲಾಗಿರುವ ಇನ್ನಿತರ ಷರತ್ತುಗಳು ಯಾವುದೇ ಬದಲಾವಣೆ ಇಲ್ಲದೆ ಮುಂದುವರೆಯುತ್ತವೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ: 12.12.2003 ರ ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ-811/ವೆಚ್ಚ-8/03 ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 7

**ಕೆ.ಎಸ್. ವೇಣುಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ.

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** 11ನೇ ಹಣಕಾಸು ಆಯೋಗದ ಯೋಜನೆಯಡಿ ಮೈಸೂರು ಜಿಲ್ಲೆ, ಹೆಚ್.ಡಿ. ಕೋಟೆ ತಾಲ್ಲೂಕು ವಡಕನಮಾಳ ಏತ ನೀರಾವರಿ ಯೋಜನೆ ಪುನರುಜ್ಜೀವನ ಕಾಮಗಾರಿಯ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ: 29.4.2003 ರ ಪತ್ರದ ಸಂಖ್ಯೆ: ಮುಇಂ/ಸನೀಮೈ/ನೀ.ಶಾಖೆ/9/2001-02/1112.
2) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ: 23.10.2003ರ ಪತ್ರ ಸಂಖ್ಯೆ: ಮುಇಂ/ಸನೀಮೈ/ನೀ.ಶಾಖೆ/9/2001-02/2839.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 29.4.2003 ರ ಪತ್ರದಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್ ರವರು ಹೆಚ್.ಡಿ. ಕೋಟೆ ತಾಲ್ಲೂಕು ವಡಕನಮಾಳ ಏತ ನೀರಾವರಿ ಯೋಜನೆ ಪುನರುಜ್ಜೀವನ ಕಾಮಗಾರಿಯ 44.80 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಸರ್ಕಾರದ ಅನುಮೋದನೆ ಕೋರಿದ್ದರು. ಮುಖ್ಯ ಇಂಜಿನಿಯರ್ ರವರ ಪ್ರಸ್ತಾವನೆಯಲ್ಲಿ ತಿಳಿಸಿದ್ದಂತೆ 143 ಎಕರೆ ಅಚ್ಚುಕಟ್ಟು ಹೊಂದಿರುವ ವಡಕನಮಾಳ ಏತ ನೀರಾವರಿ ಪುನರುಜ್ಜೀವನ ಕಾಮಗಾರಿಯ 12.05 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ 11ನೇ ಹಣಕಾಸು ಯೋಜನೆಯಡಿ ಮುಖ್ಯ ಇಂಜಿನಿಯರ್ ರವರ ಮಟ್ಟದಲ್ಲಿ 2002-03ನೇ ಸಾಲಿನಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ಮತ್ತು ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ, ಮೈಸೂರು ಇವರಿಂದ ತಾಂತ್ರಿಕ ಮಂಜೂರಾತಿಯನ್ನು ನೀಡಲಾಗಿದೆ.

ಬೇಸಿಗೆ ಕಾಲದಲ್ಲಿ ನದಿಯ ಬಲದಂಡೆ ಭಾಗದಲ್ಲಿ ಮಾತ್ರ ಹರಿಯುವ ನೀರನ್ನು ಎಡದಂಡೆಯಲ್ಲಿರುವ ಈ ಯೋಜನೆಗೆ ಲಭ್ಯವಾಗುವಂತೆ ಮಾಡಲು ನದಿಯ ಪಾತ್ರದಲ್ಲಿ ಆಗಮನ ಕಾಲುವೆ ಮತ್ತು ಕೆಳಮಟ್ಟದ ಪಂಪ್‌ವೆಲ್ ನಿರ್ಮಿಸಿ 45 ಹೆಚ್.ಪಿ. ಪಂಪು ಮತ್ತು ಮೋಟಾರು ಅಳವಡಿಸಿ ರೈಸಿಂಗ್ ಮೇನ್ ಮೂಲಕ ನೀರನ್ನು ಜಮೀನಿಗೆ ಒದಗಿಸಲು ಮಂಜೂರಾದ ಅಂದಾಜಿನಲ್ಲಿ ಅವಕಾಶ ಮಾಡಲಾಗಿತ್ತು. ಆಗಮ ಕಾಲುವೆಯಲ್ಲಿ ಹೂಳು ತುಂಬಿಕೊಳ್ಳುವುದರಿಂದಲೂ ಮಳೆಗಾಲದಲ್ಲಿ ಪಂಪು ಮತ್ತು ಮೋಟಾರನ್ನು ಬಿಚ್ಚಿಡುವುದು ಹಾಗೂ ಜೋಡಣೆ ಮಾಡುವುದು ಕಷ್ಟದಾಯಕವಾಗುವುದರಿಂದ ಮತ್ತು ಹಾಲಿ ಇರುವ ಕಟ್ಟಡಗಳು ಜಖಂ ಆಗುವ ಸಂಭವವಿರುವುದರಿಂದ ಯೋಜನೆಯು ತಾಂತ್ರಿಕವಾಗಿ ಶಕ್ಯವಾಗುವುದಿಲ್ಲವೆಂದು ಕಂಡುಬಂದುದ್ದರಿಂದ ಯೋಜನೆಯಲ್ಲಿ (1) ನದಿಯ ಕನಿಷ್ಠ ನೀರಿನ ಮಟ್ಟಕ್ಕಿಂತ ಕೆಳಭಾಗದಲ್ಲಿ ಶೇಖರಣಾ ತೊಟ್ಟಿ ನಿರ್ಮಾಣ (2) ಪಂಪ್‌ವೆಲ್ ನಿರ್ಮಾಣ (3) ಪಂಪ್ ಹೌಸ್ ನಿರ್ಮಾಣ (4) 45 ಹೆಚ್.ಪಿ. ಡೀಪ್ ವೆಲ್ ಪಂಪು ಮತ್ತು ಮೋಟಾರನ್ನು ಅಳವಡಿಸುವುದು. ಈ ಅಂಶಗಳನ್ನೊಳಗೊಂಡಂತೆ ಅಂದಾಜನ್ನು ಮಾರ್ಪಡಿಸಿ, ಮಾರ್ಪಡಿಸಿದ 44.80 ಲಕ್ಷ ರೂ.ಗಳ ಅಂದಾಜಿಗೆ ದಿನಾಂಕ: 25.2.2003 ರಂದು ಜರುಗಿದ ಮೌಲ್ಯ ನಿರ್ಣಯ ಸಮಿತಿಯ ಸಭೆಯಲ್ಲಿ ತೀರುವಳಿ ಪಡೆದುಕೊಂಡು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಆಡಳಿತಾತ್ಮಕ ಅನುಮೋದನೆಗಾಗಿ ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿದ್ದರು.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಲವು ಸೂಚನೆಗಳನ್ನು ನೀಡಿ ಯೋಜನೆಯ ಅಂದಾಜನ್ನು ರೂ. 40.00 ಲಕ್ಷಕ್ಕಿಂತಲೂ ಕಡಿಮೆ ಮೊತ್ತಕ್ಕೆ ಮಿತಿಗೊಳಿಸಿ ಅದರಂತೆ ಮಾರ್ಪಡಿಸಿ ಮರುಸಲ್ಲಿಸುವಂತೆ ದಿನಾಂಕ: 9.9.2003 ರ ಪತ್ರದಲ್ಲಿ ಮುಖ್ಯ ಇಂಜಿನಿಯರ್ ರವರಿಗೆ ಸೂಚಿಸಲಾಗಿತ್ತು. ಸರ್ಕಾರದ ಸೂಚನೆಗೆ ಅನುಸಾರ ಮುಖ್ಯ ಇಂಜಿನಿಯರ್ ರವರು ಯೋಜನೆಯಲ್ಲಿ ಮೆದು ಉಕ್ಕಿನ ಏರು ಕೊಳವೆಯ ಬದಲಾಗಿ ಪಿ.ಎಸ್.ಸಿ ಏರು ಕೊಳವೆ ಪೈಪುಗಳನ್ನು ಅಳವಡಿಸುವುದು, ಕಲೆಕ್ಟರ್ ಪೈಪ್ ಲೈನ್ ಮತ್ತು ಕಲೆಕ್ಟರ್ ಬಾವಿಯ ನಿರ್ಮಾಣ, ಜಾಕ್ ವೆಲ್ ಅಭಿವೃದ್ಧಿ, 45 ಅಶ್ವಶಕ್ತಿಯ 2 ಡೀಪ್ ವೆಲ್ ಟರ್ಬೈನ್ ಪಂಪುಗಳನ್ನು ಅಳವಡಿಸುವುದು ಇತ್ಯಾದಿಗಳನ್ನು ಒಳಗೊಂಡಂತೆ ಅಂದಾಜು ಪಟ್ಟಿಯನ್ನು 39.90 ಲಕ್ಷ ರೂ.ಗಳಿಗೆ ಪರಿಷ್ಕರಿಸಿ ಮೇಲೆ (2) ರಲ್ಲಿ ಓದಲಾದ ದಿನಾಂಕ: 23.10.2003 ರ ಪತ್ರದೊಂದಿಗೆ ಸಲ್ಲಿಸಿರುತ್ತಾರೆ.

11ನೇ ಹಣಕಾಸು ಆಯೋಗದಡಿ ಕೈಗೊಳ್ಳುವ ಕಾಮಗಾರಿಗಳ ಪರಿಷ್ಕೃತ ಕ್ರಿಯಾ ಯೋಜನೆಯಲ್ಲಿ 35.00 ಲಕ್ಷ ರೂ.ಗಳ ಅಂದಾಜು ವೆಚ್ಚದಲ್ಲಿ ಈ ಕಾಮಗಾರಿಯ ರಾಜ್ಯ ಮಟ್ಟದ ಅಧಿಕಾರಯುಕ್ತ ಸಮಿತಿಯಿಂದ ಅನುಮೋದನೆಗೊಂಡಿದೆ. ಈ ಯೋಜನೆಯನ್ನು ಪೂರ್ಣಗೊಳಿಸಲು ಕೊರತೆಯಿರುವ 4.90 ಲಕ್ಷ ರೂ.ಗಳ ಕ್ರಿಯಾ ಯೋಜನೆಯ ಒಟ್ಟಾರೆ ಉಳಿತಾಯದಿಂದ ಭರಿಸಲಾಗುವುದೆಂದು ಮುಖ್ಯ ಇಂಜಿನಿಯರ್ ರವರು ತಿಳಿಸಿ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ಕೋರಿರುತ್ತಾರೆ.

ವಿಷಯವನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 62 ಏನೀಯೋ 2003, ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ಹೇಳಿರುವ ಅಂಶಗಳ ಹಿನ್ನೆಲೆಯಲ್ಲಿ 11ನೇ ಹಣಕಾಸು ಯೋಜನೆಯಡಿ "ವಿಶೇಷ ಸಮಸ್ಯೆ ಅನುದಾನಗಳು-ರೋಗಗ್ರಸ್ಥ ಮತ್ತು ನಿಷ್ಕ್ರಿಯೆ ಏತ ನೀರಾವರಿ ಯೋಜನೆಗಳು ಲೆಕ್ಕ ಶೀರ್ಷಿಕೆ 2702-80-800-0-12-101" ಸೇರಿರುವ ಮೈಸೂರು ಜಿಲ್ಲೆ, ಹೆಚ್.ಡಿ. ಕೋಟೆ ತಾಲ್ಲೂಕು ವಡಕನಮಾಳ ಏತ ನೀರಾವರಿ ಯೋಜನೆಯ ಪುನರುಜ್ಜೀವನ ಕಾಮಗಾರಿಯ ಪರಿಷ್ಕೃತ 39.90 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಈ ಕೆಳಕಂಡ ಷರತ್ತುಗಳೊಂದಿಗೆ ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1. ಈ ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅಂದಾಜು ವೆಚ್ಚವನ್ನು ಮೀರಕೂಡದು ಹಾಗೂ ಕಾಮಗಾರಿಯನ್ನು ದಿನಾಂಕ: 1.1.2005 ರೊಳಗಾಗಿ ಪೂರ್ಣಗೊಳಿಸತಕ್ಕದ್ದು.
2. ಈ ಕಾಮಗಾರಿಯ ಅಂದಾಜು ಪಟ್ಟಿಗೆ ಸಂಬಂಧಿಸಿದಂತೆ ಸಣ್ಣ ನೀರಾವರಿ ಇಲಾಖೆಯ ಮೌಲ್ಯ ನಿರ್ಣಯ ಸಮಿತಿಯು ದಿನಾಂಕ: 25.2.2003 ರಂದು ನಡೆದ ಸಭೆಯಲ್ಲಿ ನೀಡಿರುವ ಸೂಚನೆಗಳನ್ನು ಚಾಚೂ ತಪ್ಪದೆ ಪಾಲಿಸತಕ್ಕದ್ದು.
3. ಯೋಜನೆಗೆ ತಾಂತ್ರಿಕ ಅನುಮೋದನೆ ನೀಡುವ ಮೊದಲು ಮುಖ್ಯ ಅಭಿಯಂತರರು ಯೋಜನೆಯ ಸವಿವರದ ಅಂದಾಜು ಹಾಗೂ ಇತರೆ ನಿರ್ಮಾಣ ವಿವರಗಳನ್ನು ಪರಿಶೀಲಿಸಿ ಅವುಗಳು ಸೂಕ್ತವಾಗಿರುವ ಬಗ್ಗೆ ದೃಢೀಕರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20.1.2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 8

**ಪಿ.ಜಿ. ಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ. (ಸಣ್ಣ ನೀರಾವರಿ)

## ಶಿಕ್ಷಣ ಸಚಿವಾಲಯ

**ವಿಷಯ:** ಕಾಲೇಜು ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಹಿಂದೆ ಡೆಮಾನ್‌ಸ್ಟ್ರೇಟರ್‌ಗಳಾಗಿ ಕರ್ತವ್ಯ ನಿರ್ವಹಿಸುತ್ತಿದ್ದು ನಂತರ ಉಪನ್ಯಾಸಕರಾಗಿ ಬಡ್ತಿ ಪಡೆದು ಕರ್ತವ್ಯ ನಿರ್ವಹಿಸುತ್ತಿರುವ ಹಿಂದೆ ಡೆಮಾನ್‌ಸ್ಟ್ರೇಟರ್‌ಗಳಾಗಿ ಸಲ್ಲಿಸಿದ ಸೇವೆಯನ್ನು ಯು.ಜಿ.ಸಿ. ವೇತನ ಶ್ರೇಣಿಗಳಲ್ಲಿ ವೃತ್ತಿ ಪದೋನ್ನತಿಗೆ ಪರಿಗಣಿಸುವ ಬಗ್ಗೆ - ಶ್ರೀ ಕೆ.ವಿ. ಜಯಚಂದ್ರ ಇವರಿಗೆ ಸಂಬಂಧಿಸಿದಂತೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಡಿ 210 ಡಿಸಿಇ 1994, ದಿನಾಂಕ: 21.12.1996.

2) ಸರ್ಕಾರಿ ಆದೇಶ ಸಂಖ್ಯೆ: ಇಡಿ 109 ಡಿಸಿಇ 1995(1) ದಿನಾಂಕ: 4.1.1996.

3) ಪತ್ರ ಸಂಖ್ಯೆ ಕಾಶಿನಿ 60 ಡೆಮಾನ್‌ಸ್ಟ್ರೇಟರ್ (ಆಂತರಿಕ) 1997 ದಿನಾಂಕ: 16.11.1999 ಕಾಲೇಜು ಶಿಕ್ಷಣ ಆಯುಕ್ತರು ರವರ ಪತ್ರ.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 21.12.1996 ರ ಆದೇಶದ ಪ್ರಕಾರ ಪದವಿ ಕಾಲೇಜಿನ ಉಪನ್ಯಾಸಕರು ತಾವು ಹಿಂದೆ ಡೆಮಾನ್‌ಸ್ಟ್ರೇಟರ್‌ಗಳಾಗಿ ಸಲ್ಲಿಸಿದ ಸೇವೆಯನ್ನು ಯು.ಜಿ.ಸಿ. ವೇತನ ಶ್ರೇಣಿಯಲ್ಲಿ ಕೇವಲ ಸ್ಥಾನೀಕರಣಕ್ಕಾಗಿ ಪರಿಗಣಿಸಲು ಅವಕಾಶ ಕಲ್ಪಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆ ದಿನಾಂಕ: 4.1.1996 ರಲ್ಲಿ ಇನ್ನಿತರೆ ಉಪನ್ಯಾಸಕರನ್ನು ಒಳಗೊಂಡಂತೆ ಶ್ರೀ ಕೆ.ವಿ. ಜಯಚಂದ್ರ, ಪ್ರಾಣಿಶಾಸ್ತ್ರ ಉಪನ್ಯಾಸಕರು ಇವರಿಗೆ ದಿನಾಂಕ: 25.9.1988 ರಿಂದ ಅನ್ವಯವಾಗುವಂತೆ ಆಯ್ಕೆ ಶ್ರೇಣಿಗೆ ಸ್ಥಾನೀಕರಣ ನೀಡಲಾಗಿದೆ.

ಮೇಲೆ (3) ರಲ್ಲಿ ಓದಲಾದ ಕಾಲೇಜು ಶಿಕ್ಷಣ ಆಯುಕ್ತರ ಪತ್ರದಲ್ಲಿ ಈ ಹಿಂದೆ ಅಂದಿನ ಖಾಸಗಿ ಅನುದಾನಿತ ಕಾಲೇಜಾಗಿದ್ದ ಚಿಕ್ಕಬಳ್ಳಾಪುರದ ಮುನ್ಸಿಪಲ್ ಪ್ರಥಮ ದರ್ಜೆ ಕಾಲೇಜಿನಲ್ಲಿ ಆಯ್ಕೆ ಶ್ರೇಣಿ ಉಪನ್ಯಾಸಕರಾದ ಶ್ರೀ ಕೆ.ವಿ. ಜಯಚಂದ್ರ ಇವರು ದಿನಾಂಕ 2.8.1971 ರಿಂದ 25.9.1972 ರವರೆಗೆ ರೂ. 250-450 ರ ವೇತನ ಶ್ರೇಣಿಯಲ್ಲಿ ಡೆಮಾನ್‌ಸ್ಟ್ರೇಟರ್ ಆಗಿ ಸೇವೆ ಸಲ್ಲಿಸಿದ್ದು, ತದನಂತರ ದಿನಾಂಕ: 25.9.1972 ರಿಂದ ರೂ. 300-700 ರ ವೇತನ ಶ್ರೇಣಿಯಲ್ಲಿ ಉಪನ್ಯಾಸಕರಾಗಿ ನೇಮಕಾತಿ ಹೊಂದಿರುತ್ತಾರೆ. ಸದರಿ ಕಾಲೇಜನ್ನು ಸರ್ಕಾರವು ತನ್ನ ವಶಕ್ಕೆ ತೆಗೆದುಕೊಂಡಿರುವ ಪ್ರಯುಕ್ತ ಸದರಿ ಕಾಲೇಜಿನಲ್ಲಿ ಸೇವೆಯಲ್ಲಿದ್ದ ಶ್ರೀಯುತರ ಸೇವೆಯನ್ನು ಸರ್ಕಾರಿ ಸೇವೆಯಲ್ಲಿ ವಿಧ್ಯುಕ್ತವಾಗಿ ವಿಲೀನಗೊಳಿಸಲಾಗಿದೆ. ಹಾಗೂ ಸರ್ಕಾರದ ಆದೇಶ ಸಂಖ್ಯೆ: ಇಡಿ 210 ಡಿಸಿಇ 1994 ದಿನಾಂಕ: 21.12.1996 ರಲ್ಲಿ ಕಲ್ಪಿಸಲಾದ ಅವಕಾಶದ ಮೇರೆಗೆ ಶ್ರೀಯುತರು ದಿನಾಂಕ: 2.8.1971 ರಿಂದ ದಿನಾಂಕ: 25.9.1972 ರವರೆಗೆ ಸಲ್ಲಿಸಿರುವ ಡೆಮಾನ್‌ಸ್ಟ್ರೇಟರ್ ಸೇವೆಯನ್ನು ಪರಿಗಣಿಸಿ ಈಗಾಗಲೇ ಶ್ರೀಯುತರಿಗೆ ಆಯ್ಕೆ ವೇತನ ಶ್ರೇಣಿಗೆ ಸ್ಥಾನೀಕರಣ ನೀಡಲಾಗಿರುವ ದಿನಾಂಕ: 4.1.1990 ರ ಸರ್ಕಾರಿ ಅಧಿಸೂಚನೆಗೆ ತಿದ್ದುಪಡಿ ಹೊರಡಿಸಿರುವ ಮೂಲಕ ಆಯ್ಕೆ ವೇತನ ಶ್ರೇಣಿಗೆ ಅರ್ಹತಾ ದಿನಾಂಕವನ್ನು ದಿನಾಂಕ: 3.8.1987 ಎಂದು ಪುನರ್‌ನಿಗದಿಪಡಿಸುವಂತೆ ಕೋರಿದ್ದಾರೆ. ಕಾಲೇಜು ಶಿಕ್ಷಣ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 201 ಡಿಸಿಇ 1999, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಪ್ರಕಾರ ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆಯಲ್ಲಿ ಶ್ರೀ ಕೆ.ವಿ. ಜಯಚಂದ್ರ, ಪ್ರಾಣಿಶಾಸ್ತ್ರ, ಉಪನ್ಯಾಸಕರು ಇವರಿಗೆ ದಿನಾಂಕ: 25.9.1988 ರಿಂದ ಅನ್ವಯವಾಗುವಂತೆ ಈಗಾಗಲೇ ನೀಡಲಾದ ಯು.ಜಿ.ಸಿ. ಆಯ್ಕೆ ಶ್ರೇಣಿಯನ್ನು ಮಾರ್ಪಡಿಸಿ, ಸರ್ಕಾರಿ ಆದೇಶ ಸಂಖ್ಯೆ: ಇಡಿ 210 ಡಿಸಿಇ 1994, ದಿನಾಂಕ: 21.12.1996 ರಲ್ಲಿ ಕಲ್ಪಿಸಿರುವ ಅವಕಾಶದನ್ವಯ ಶ್ರೀಯುತರು ದಿನಾಂಕ: 2.8.1971 ರಿಂದ 25.9.1972 ರವರೆಗೆ ಸಲ್ಲಿಸಿರುವ ಡೆಮಾನ್‌ಸ್ಟ್ರೇಟರ್ ಸೇವೆಯನ್ನು ಗಣನೆಗೆ ತೆಗೆದುಕೊಂಡು ಸದರಿಯವರ ದಿನಾಂಕ: 2.8.1971 ರಿಂದ 16 ವರ್ಷಗಳ ಸತತ ಸೇವೆ ಗೈದಿರುವ ಪ್ರಯುಕ್ತ ದಿನಾಂಕ: 3.8.1987 ರಿಂದ ಅನ್ವಯವಾಗುವಂತೆ ಯು.ಜಿ.ಸಿ. 'ಆಯ್ಕೆ ವೇತನ ಶ್ರೇಣಿಯಲ್ಲಿ' ಸ್ಥಾನೀಕರಣದ ಅರ್ಹತಾ ದಿನಾಂಕವನ್ನು ಪುನರ್ ನಿಗದಿಪಡಿಸಿದೆ.

ಉಪನ್ಯಾಸಕರಿಗೆ ಸಲ್ಲಬೇಕಾದ ಆರ್ಥಿಕ ಸೌಲಭ್ಯವು ಈಗಾಗಲೇ ಸರ್ಕಾರದ ಆದೇಶ ಸಂಖ್ಯೆ: ಇಡಿ 210 ಡಿಸಿಇ 1994, ದಿನಾಂಕ: 21.12.1996 ರಲ್ಲಿ ಸ್ಪಷ್ಟಪಡಿಸಿರುವಂತೆ ಭವಿಷ್ಯೋತ್ತರವಾಗಿ ಲಭ್ಯವಾಗುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1145 ವೆಚ್ಚ-8: 2001, ದಿನಾಂಕ: 5.12.2001 ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 9

**ಕೆ.ಎಸ್. ವೇಣುಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ.

**INFORMATION, TOURISM AND YOUTH SERVICES SECRETARIAT**

**Sub:** Constitution of State Level Monitoring Committee.

**Read :** D.O. letter No. 1115-Secy(T)/2003, dated 7.3.2003 from the Secretary, Ministry of Tourism, Government of India, New Delhi.

**Preamble:**

The Secretary, Ministry of Tourism, Government of India, in their letter read above, has stated that the Government of India, Ministry of Tourism have sanctioned projects under the schemes for Circuit Development, Destination Development and Village Tourism. It is necessary to regularly monitor these projects in order to ensure their timely implementation and also to co-ordinate between various Departments wherever necessary. Therefore, Government of India have suggested to constitute a State Level Monitoring Committee for the purpose of effective Monitoring of these projects.

**Government Order No: ITY 99 TTT 2003, Bangalore, Dated 27th December 2003**

After careful consideration, Government are pleased to constitute the following State Level Monitoring Committee:-

| | | |
|---|---|---|
| 1 | The Principal Secretary / Secretary to Government, Information, Tourism and Youth Services Department | Chairman |
| 2 | One representative of Karnataka Tourism Forum | Member |
| 3 | One representative of Skal International, Bangalore Woodstock, 18/1, Wood Street, Bangalore-560 025 | Member |
| 4 | Sri S.K. Kallolikar, Director, Karnataka University, Post-Graduate Centre, Bijapur | Member |
| 5 | Government of India, Tourism Departments' nominee | Member |
| 6 | Nominee of the Executive agency | Member |
| 7 | The Commissioner, Department of Tourism | Secretary |

This Committee shall meet once in a month preferably in the 3rd week of the month. This committee shall review the status of the project and furnish a report to Government of India regularly.

By Order and in the Name of the Governor of Karnataka,

PR-10

**S. Seethamma**

Under Secretary to Government,

Information, Tourism and Youth Services Department.

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ದೇವರಾಜ ಅರಸು ಸಂಶೋಧನಾ ಸಂಸ್ಥೆಯಲ್ಲಿ ಆಡಳಿತಾಧಿಕಾರಿಗಳಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಕೆ.ಎನ್. ನಾಗರಾಜರೆಡ್ಡಿ, ಇವರ ಸೇವಾ ಅವಧಿಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1) ಅಧಿಸೂಚನೆ ಸಂಖ್ಯೆ: ಸಕಇ 155 ಬಿಸಿಎ 2001, ದಿನಾಂಕ: 3.1.2002.

2) ಆದೇಶ ಸಂಖ್ಯೆ: ಸಕಇ 183 ಬಿಸಿಎ 2002, ದಿನಾಂಕ: 13.12.2002.

3) ನಿರ್ದೇಶಕರು, ದೇವರಾಜ ಅರಸು ಸಂಶೋಧನಾ ಸಂಸ್ಥೆರವರ ಪತ್ರ ಸಂಖ್ಯೆ: ದೇಸಂಸಂ/ಆವೈಕ/ಕಮೇ/ಸಿಆರ್-24/2001-02, ದಿನಾಂಕ: 20.9.2003.

**ಪ್ರಸ್ತಾವನೆ:**

ಮೇಲೆ ಒಂದರಲ್ಲಿ ಓದಲಾಗಿರುವ ಅಧಿಸೂಚನೆಯಲ್ಲಿ ಶ್ರೀ ಕೆ.ಎನ್. ನಾಗರಾಜರೆಡ್ಡಿ, ವ್ಯವಸ್ಥಾಪಕರು, (ವಸ್ತು ಪ್ರದರ್ಶನ ಮತ್ತು ರಫ್ತು) ಕರ್ನಾಟಕ ಚರ್ಮ ಕೈಗಾರಿಕೆ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರನ್ನು ಅವರದೇ ಆದ ಸ್ವಂತ ವೇತನ ಶ್ರೇಣಿಯಲ್ಲಿ ಶ್ರೀ ದೇವರಾಜ ಅರಸು ಸಂಶೋಧನಾ ಸಂಸ್ಥೆ, ಬೆಂಗಳೂರು ಇಲ್ಲಿ ತೆರವಿರುವ ಆಡಳಿತಾಧಿಕಾರಿ ಹುದ್ದೆಗೆ ಸದರಿಯವರು ಹಾಜರಾದ ದಿನಾಂಕದಿಂದ ಒಂದು ವರ್ಷದವರೆಗೆ ಪ್ರತಿ ನಿಯೋಜನಾ ಮೇರೆಗೆ ನಿಯೋಜನಾ ಷರತ್ತಿಗೆ ಒಳಪಟ್ಟು, ಮುಂದಿನ ಆದೇಶ ಆಗುವವರೆಗೆ ನೇಮಿಸಲಾಗಿದೆ.

ಮೇಲೆ ಎರಡರಲ್ಲಿ ಓದಲಾಗಿರುವ ಆದೇಶದಲ್ಲಿ ಶ್ರೀ ಕೆ.ಎನ್. ನಾಗರಾಜರೆಡ್ಡಿ, ಆಡಳಿತಾಧಿಕಾರಿಗಳು, ದೇವರಾಜ ಅರಸು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರ ನಿಯೋಜನಾ ಸೇವೆಯನ್ನು ದಿನಾಂಕ: 3.1.2003 ರಿಂದ ಅನ್ವಯವಾಗುವಂತೆ ಮುಂದಿನ ಒಂದು ವರ್ಷದವರೆಗೆ (ದಿನಾಂಕ: 3.1.2004 ಕ್ಕೆ ಅಂತ್ಯಗೊಳ್ಳುವುದಿದ್ದು) ವಿಸ್ತರಿಸಿ ಆದೇಶಿಸಲಾಗಿದೆ.

ಮೇಲೆ ಮೂರರಲ್ಲಿ ಓದಲಾಗಿರುವ ಪತ್ರದಲ್ಲಿ ನಿರ್ದೇಶಕರು, ದೇವರಾಜ ಅರಸು ಸಂಶೋಧನಾ ಸಂಸ್ಥೆರವರು ಶ್ರೀ ಕೆ.ಎನ್. ನಾಗರಾಜರೆಡ್ಡಿ, ಆಡಳಿತಾಧಿಕಾರಿಗಳು ದೇವರಾಜ ಅರಸು ಸಂಶೋಧನಾ ಸಂಸ್ಥೆಯ ಎಲ್ಲಾ ಕಾರ್ಯಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾತ್ರವಹಿಸಿ ಆಸಕ್ತಿಯಿಂದ ಸಮರ್ಪಕವಾಗಿ ಕಾರ್ಯನಿರ್ವಹಿಸುತ್ತಿರುವುದರಿಂದ ಸದರಿ ಅಧಿಕಾರಿಗಳ ಸೇವೆಯನ್ನು ಸಂಸ್ಥೆಯ ಆಡಳಿತ ಹಿತದೃಷ್ಟಿಯಿಂದ ಮುಂದಿನ ಎರಡು ವರ್ಷಗಳ ಅವಧಿಯವರೆಗೆ ಮುಂದುವರೆಸಲು ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ನಿರ್ದೇಶಕರು, ದೇವರಾಜ ಅರಸು ಸಂಶೋಧನಾ ಸಂಸ್ಥೆರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 162 ಬಿಸಿಎ 2003, ಬೆಂಗಳೂರು, ದಿನಾಂಕ: 2ನೇ ಜನವರಿ 2004**

ಕ್ರಮಸಂಖ್ಯೆ (1)(2)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 3.1.2002 ಮತ್ತು ದಿನಾಂಕ: 13.12.2002 ರಲ್ಲಿ ಆದೇಶಿಸಿರುವ ಶ್ರೀ ಕೆ.ಎನ್. ನಾಗರಾಜರೆಡ್ಡಿ, ಆಡಳಿತಾಧಿಕಾರಿಗಳು, ದೇವರಾಜ ಅರಸು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರ ನಿಯೋಜನಾ ಸೇವೆಯನ್ನು ದಿನಾಂಕ: 3.1.2004 ರಿಂದ ಅನ್ವಯವಾಗುವಂತೆ ಮುಂದಿನ ಒಂದು ವರ್ಷದವರೆಗೆ ಸರ್ಕಾರವು ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 11

**ಎಂ.ಎಸ್. ಮರುಳಸಿದ್ಧಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಮಾಜ ಕಲ್ಯಾಣ ಇಲಾಖೆ.